ಅಕ್ಷರ
ಕವಿ ಸಂಧಾನ

# ಅನಾ ಅಖ್ಮತೋವಾ

## 'ರಿಕ್ವಿಯಂ' ಮತ್ತಿತರ ನೂರು ಕವಿತೆಗಳು

ಅನುವಾದ: ಶಾ. ಬಾಲುರಾವ್





ಆನಾ ಆಹ್ಮತೋವಾ. ೧೯೨೦ ರ ಛಾಯಚಿತ್ರ.
ಪ್ರತಿಕೃತಿ : ರಂಜನ್

ಅಕ್ಷರ ಕವಿ–ಸಂಧಾನ–೨

# ಆನಾ ಆಹ್ಮತೋವಾ :

## 'ರಿಕ್ವಿಯಂ' ಮತ್ತಿತರ ನೂರು ಕವಿತೆಗಳು



ಮೂಲ ರಷ್ಯಭಾಷೆಯಿಂದ ಅನುವಾದ :
ಶಾ. ಬಾಲುರಾವ್




ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ

*Anna Ahmatova : 'Requiem' mattitara Nuru Kavitegalu* (*Requiem* and One Hundred Other Poems of Anna Akhmatova). Translated from Russian by S. Balu Rao, 'Kaveri', 131 J- Extension, Lakshmi Nagar, Delhi 110 092 and published by Akshara Prakashana, Heggodu (Sagara), Karnataka 577 417, in their series, 'Akshara Kavi-Sandhana'. 1991. Price : Rs. 50-00.

*Cover-design* : Pramod Ganapatye.

*Portraits of Akhmatova* : Ranjan, New Delhi.

The translator records his gratitude to the following for the help he has received from them in the course of this translation : Sri H. S. Harishankar, Mysore; Miss Anamika Acharya, USSR Information Dept., New Delhi, and Dr. Hemachandra Pande, Institute of Russian Studies, J. N. University, New Delhi.



ಮೊದಲ ಮುದ್ರಣ

ಪ್ರಕಾಶಕರು :
ಅಕ್ಷರ ಪ್ರಕಾಶನ
ಹೆಗ್ಗೋಡು (ಸಾಗರ), ಕರ್ನಾಟಕ 577 417

ಮುದ್ರಕರು : ಪ್ರಗತಿ ಪ್ರಿಂಟರ್ಸ್, ಶಿವಮೊಗ್ಗ

ಬೆಲೆ : ರೂ. 50–00



ಪೂಜ್ಯ ಗುರು

ದಿವಂಗತ ಶ್ರೀ ಬಿ. ಸೀ. ಅವರ

ಪುಣ್ಯಸ್ಮೃತಿಗೆ

# ಒಳಪಿಡಿ

ಅಹ್ಮತೋವಾ ತನ್ನ ಹೆಚ್ಚಿನ ಕವಿತೆಗಳಿಗೆ ಶೀರ್ಷಿಕೆ ಕೊಟ್ಟಿಲ್ಲ. ಕವಿತೆಗಳ ಮೊದಲ ಸಾಲುಗಳಿಂದಲೇ ಅವನ್ನು ಗುರುತಿಸುವುದು ಸಾಮಾನ್ಯ. ಆ ಕಾರಣ, ಈ ಒಳಪಿಡಿಯಲ್ಲಿ ಮಾಮೂಲಿನಂತೆ ಅವಳ ಕವಿತೆಗಳನ್ನು ಪಟ್ಟಿಮಾಡುವ ಬದಲು ಕವಿತಾಸಂಗ್ರಹಗಳನ್ನು ಕ್ರಮಶಃ ಪರಿಚಯಿಸಿಕೊಡಲಾಗಿದೆ. ಆದರೆ ಒಂದು ಅಪವಾದದೊಂದಿಗೆ. 'ರಿಕ್ವಿಯಂ' ಅಹ್ಮತೋವಾಳ ನಡುಗಾಲದ ಕೃತಿ, ಮೊದಲ ಐದು ಸಂಗ್ರಹಗಳು ಪ್ರಕಟವಾದ ಮೇಲೆ ರಚಿತವಾದದ್ದು. ಆದರೆ ಅದು ಅತ್ಯಂತ ಪ್ರಮುಖ ಕೃತಿ ಎಂಬ ಕಾರಣದಿಂದಾಗಿ ಈ ಅನುವಾದವನ್ನು ಅದರಿಂದ ಷುರುಮಾಡಿದೆ. ಕವಿತೆಗಳ ರಚನೆಯ ವರ್ಷ ಹಾಗೂ ಅವನ್ನು ಒಳಗೊಂಡ ಸಂಗ್ರಹಗಳ ಪ್ರಕಟನೆಯ ವರ್ಷ – ಇವುಗಳ ಕಾಲಾನುಕ್ರಮವನ್ನು ಅನುಸರಿಸಿ ಈ ಸಂಪುಟದಲ್ಲಿ ಕವಿತೆಗಳನ್ನು ಅಳವಡಿಸಿದೆ.

**೧. 'ರಿಕ್ವಿಯಂ' ('ಶಾಂತಿಗೀತೆ').** ಪು. 1–10

ಮುನ್ನುಡಿಯ ಬದಲು, ಸಮರ್ಪಣೆ, ಪೀಠಿಕೆ, ಉಪಸಂಹಾರ – ಇವುಗಳನ್ನು ಬಿಟ್ಟು ಒಟ್ಟು ಹತ್ತು ಭಾವಗೀತೆಗಳ ಸಂಗ್ರಹ ಇದು. ೧೯೩೫ರಲ್ಲಿ, ಮಗ ಲೆವ್ ಮತ್ತು ಮೂರನೆಯ ಗಂಡ ಪ್ಯೂನಿನ್‌ರ ಬಂಧನವಾದಾಗ ಈ ಮಾಲೆಯ ಮೊದಲ ಕವಿತೆ ರೂಪತಾಳಿ, ೧೯೪೦ರಲ್ಲಿ ಮತ್ತೆ ಸ್ತಾಲಿನ್‌ನ ದಬ್ಬಾಳಿಕೆಯ ಸಡಿಲಿಕೆ ಪ್ರಾರಂಭವಾಗುವವರೆಗೂ ಬಿಟ್ಟುಬಿಟ್ಟು ಮುಂದುವರೆಯಿತು. ಮುಂದಿನ ಇಪ್ಪತ್ತಮೂರು ವರ್ಷಗಳ ಕಾಲ ಪ್ರಕಟನೆಗೆ ಅವಕಾಶವಿಲ್ಲದೆ ಸ್ನೇಹಿತರ ನಡುವೆಯೇ ಸುತ್ತಾಡುತ್ತಿತ್ತು. ಅಪಾಯಕಾರಿಯಲ್ಲವೆಂದು ಕಂಡುಬಂದ ಒಂದೊಂದು ಬಿಡಿಕವಿತೆ ಮಾತ್ರ ಹಿಂದುಮುಂದಿಲ್ಲದೆ ಸಂಕಲನಗಳಲ್ಲಿ ಕಾಣಿಸಿಕೊಳ್ಳುತ್ತಿತ್ತು. ೧೯೬೨ ರಲ್ಲಿ ಅಹ್ಮತೋವಾ 'ನೋವಿ ಮೀರ್' ಪತ್ರಿಕೆಯಲ್ಲಿ ಪ್ರಕಟಿಸಲು ಪ್ರಯತ್ನಿಸಿ ವಿಫಲಳಾದಳು. ೧೯೬೩ ರಲ್ಲಿ ರಷ್ಯದ ಹೊರಗೆ ಜರ್ಮನಿಯ ಮ್ಯೂನಿಚ್‌ನಲ್ಲಿ ಅಚ್ಚಾಗಿ ಬಂದಿತು. ರಷ್ಯದಲ್ಲಿ ಪೂರ್ಣವಾಗಿ ಅಚ್ಚಾದದ್ದು ಅಹ್ಮತೋವಾ ಸತ್ತ ಮೇಲೆಯೇ, ಈಗ್ಗೆ ಮೂರು ವರ್ಷಗಳ ಹಿಂದೆ, ೧೯೮೭ ರಲ್ಲಿ, 'ಅಕ್ಟೋಬರ್' ಮತ್ತು 'ನೀವಾ' ಪತ್ರಿಕೆಗಳಲ್ಲಿ ಮತ್ತು ನಂತರದ ಸಂಗ್ರಹಗಳಲ್ಲಿ.

**೨. 'ಸಂಜೆ' ('ವೇಚರ್').** ಪು. 11–19

ಇದು ಅಹ್ಮತೋವಾಳ ಮೊದಲ ಸಂಗ್ರಹ. ಮಾರ್ಚ್ ೧೯೧೨ರಲ್ಲಿ ಗಂಡ ಗುಮಿಲ್ಯೊವ್ ಮತ್ತಿತ್ತರ ಜತೆಕವಿಗಳು ಸ್ಥಾಪಿಸಿದ್ದ 'ಕವಿಕೂಟ'ದಿಂದ ಕೇವಲ ಮುನ್ನೂರು ಪ್ರತಿಗಳ ಸಂಸ್ಕರಣದಲ್ಲಿ ಪ್ರಕಟವಾಯಿತು. ಅಹ್ಮತೋವಾ ಇದನ್ನು ಮತ್ತೆ ಪ್ರಕಟಿಸಲಿಲ್ಲ. ಬದಲು ಇದರ ಕೆಲವು ಕವಿತೆಗಳನ್ನು ಮುಂದಿನ ಸಂಗ್ರಹದಲ್ಲಿ ಸೇರಿಸಿಕೊಂಡಳು, 'ವೇಚರ್' ಅಂದರೆ 'ಸಂಜೆ', ಅಲ್ಲದೆ 'ಸಂಜೆ ಹೊತ್ತಿನ ಗೋಷ್ಠಿ' ಎಂಬ ಅರ್ಥವೂ ಇದೆ.

ಮೊದಲ ಮುದ್ರಣದಲ್ಲಿದ್ದದ್ದು ೪೬ ಕವಿತೆಗಳು. ಇತ್ತೀಚಿನ ಸಮಗ್ರ ಕಾವ್ಯದಲ್ಲಿ ಪ್ರಾಯಶಃ ಅಹ್ಮತೋವಾ ಸೇರಿಸದೆ ಬಿಟ್ಟಿದ್ದ ಕೆಲವಾರು ಮೊದಲಿನ ಕವಿತೆಗಳನ್ನು

ಸೇರಿಸಿಯೋ ಏನೋ ಒಟ್ಟು ೫೩ ಕವಿತೆಗಳಿವೆ. ಇಲ್ಲಿ ಅವುಗಳಿಂದ ಆಯ್ದ ಒಂಬತ್ತು ಕವಿತೆಗಳ ಅನುವಾದವನ್ನು ಕೊಟ್ಟಿದೆ.

**೩. 'ಜಪಮಾಲೆ' ('ಚ್ಯೋತ್ಕಿ').** ಪು. 20–26
ಇದು ಎರಡನೆಯ ಸಂಗ್ರಹ. ಮೊದಲ ಸಂಸ್ಕರಣ ೧೯೧೪ರಲ್ಲಿ, ಸಾವಿರ ಪ್ರತಿಗಳು. ಸಂಗ್ರಹಕ್ಕೆ ತುಂಬ ಯಶಸ್ವಿ ದೊರೆತು ಮುಂದಿನ ಒಂಬತ್ತು ವರ್ಷಗಳಲ್ಲಿ, ೧೯೨೩ ರವರೆಗೆ, ಒಂಬತ್ತು ಸಲ ಪುನರ್ಮುದ್ರಿತವಾಯಿತು. ಒಟ್ಟು ೫೨ ಕವಿತೆಗಳಿವೆ. ಅವುಗಳಲ್ಲಿ ಆರನ್ನು ಅನುವಾದಿಸಿಕೊಟ್ಟಿದೆ.

**೪. 'ಬೆಳ್ಳಕ್ಕಿ ಹಿಂಡು' ('ಬೇಲಯಾ ಸ್ತಾಯಾ').** ಪು. 27–44
ಮೂರನೆ ಸಂಗ್ರಹ. ಮೊದಲ ಸಂಸ್ಕರಣ, ಸೆಪ್ಟೆಂಬರ್ ೧೯೧೭; ಎರಡು ಸಾವಿರ ಪ್ರತಿಗಳು. ಮೊದಲೆರಡು ಸಂಗ್ರಹಗಳಿಗಿಂತ ಹೆಚ್ಚು ಕವಿತೆಗಳಿಂದ ಕೂಡಿದೆ. ಅಂದಿನ ಸಾಮಾಜಿಕ–ರಾಜಕೀಯ ಸ್ಥಿತಿಗಳು ಅಸ್ತವ್ಯಸ್ತವಾಗಿದ್ದರೂ ೧೯೨೩ರವರೆಗೆ ನಾಲ್ಕು ಮುದ್ರಣ ಕಂಡಿತು. ಮೊದಲ ಮುದ್ರಣದಲ್ಲಿದ್ದದ್ದು ೮೩ ಕವಿತೆಗಳು, ಈಚಿನ ಸಮಗ್ರಕಾವ್ಯಗಳಲ್ಲಿರುವುದು ೯೫. ಇಲ್ಲಿ ಅವುಗಳಲ್ಲಿ ಹದಿನೇಳನ್ನು ಆರಿಸಿ ಅನುವಾದಿಸಿ ಕೊಟ್ಟಿದೆ.

**೫. 'ಗುಬ್ಬಚ್ಚಿಬಾಳೆ' ('ಪದ್‌ರೋಷ್ನಿಕ್)** ಪು. 45–50.
ನಾಲ್ಕನೆ ಸಂಗ್ರಹ. ಏಪ್ರಿಲ್ ೧೯೨೧ರಲ್ಲಿ ಸಾವಿರ ಪ್ರತಿಗಳ ಸಂಸ್ಕರಣದಲ್ಲಿ ಪ್ರಕಟವಾಯಿತು. ಮತ್ತೆ ಪುನರ್ಮುದ್ರಿತವಾಗಲಿಲ್ಲ. ಬದಲು, ಇದರಲ್ಲಿನ ಕವಿತೆಗಳು ಮುಂದಿನ ಸಂಗ್ರಹದಲ್ಲಿ ಸೇರಿಕೊಂಡು ಬಂದವು. 'ಪದ್‌ರೋಷ್ನಿಕ್' ಶಬ್ದವನ್ನು ಇಂಗ್ಲಿಷಿಗೆ 'ಪ್ಲಾಂಟನ್' ಎಂದು ಅನುವಾದಿಸುವುದು ರೂಢಿ. ಈ ಶಬ್ದಕ್ಕೆ ರಷ್ಯಭಾಷೆಯಲ್ಲಿ ಮೂರು ಅರ್ಥಗಳಿವೆ: ೧) ಬಾಳೆ; ೨) ನೆಲದ ಮೇಲೆಯೇ ಹರಡಿ ಬೆಳೆಯುವ ಅಗಲವಾದ ಚಪ್ಪಟೆಯೆಲೆಯ ಒಂದು ಸಸ್ಯ; ೩) ದಾರಿಬುತ್ತಿ ಅಥವಾ ಪುಡಿತಿಂಡಿ. ಸಂಗ್ರಹದ ಶೀರ್ಷಿಕೆಗೆ ಆಧಾರ ನೀಡುವ ಒಂದು ಕವಿತೆಯಲ್ಲಿ ಆಹ್ಮತೋವಾ "ಆ ದೂರದ ಇನ್ನೊಂದು ವಸಂತದ್ದಾಗಿ ನನಗೆ ಕಾಣಿಸುತ್ತಿರುವುದೆಂದರೆ 'ಪದ್‌ರೋಷ್ನಿಕ್''' ಎಂದಿದ್ದಾಳೆ. ಅದನ್ನೂ ಮೇಲಿನ ಎರಡನೆ ಅರ್ಥವನ್ನೂ ಗಮನದಲ್ಲಿಟ್ಟು 'ಗುಬ್ಬಚ್ಚಿಬಾಳೆ' ಎಂದು ಅನ್ವಯವಾಗಿ ಅನುವಾದಿಸಿದ್ದೇನೆ. ಗುಬ್ಬಚ್ಚಿಬಾಳೆ ಮೈಸೂರು ಕಡೆ ಬೆಳೆಯುವ ಒಂದು ಕ್ಷುದ್ರ ಸಸ್ಯ, ಅದರ ಎಲೆಯಿಂದ ರುಚಿಯಾದ ಬೋಂಡ ಮಾಡುವುದುಂಟು.

'ಪದ್‌ರೋಷ್ನಿಕ್'ನ ಮೊದಲ ಮುದ್ರಣದಲ್ಲಿದ್ದದ್ದು ೩೮ ಕವಿತೆಗಳು. ಆ ಸಂಖ್ಯೆ ಈಚಿನ ಸಮಗ್ರಕಾವ್ಯಗಳಲ್ಲಿ ೩೨ಕ್ಕೆ ಇಳಿದಿದೆ. ಅವುಗಳಲ್ಲಿ ಆರರ ಅನುವಾದ ಇಲ್ಲಿದೆ.

**೬. 'ಕ್ರಿಸ್ತೋತ್ತರ ೧೯೨೧' ('ಆನೊ ದಾಮಿನಿ ೧೯೨೧').** ಪು. 51–58
ಐದನೆ ಸಂಗ್ರಹ. ಪ್ರಕಟವಾದದ್ದು ನವೆಂಬರ್ ೧೯೨೧ರಲ್ಲಾದರೂ ಒಳಪುಟದಲ್ಲಿ ೧೯೨೨ ಎಂದು ತೋರಿಸಲಾಗಿದೆ. ಕೆಲವಾರು ತೀರಾ ಮುಂಚಿನ ಹಾಗೂ ೧೯೨೨ರ ಕವಿತೆ

ಗಳೊಂದಿಗೆ ೧೯೨೩ರಲ್ಲಿ ಪುನರ್ಮುದ್ರಿತವಾಯಿತು. ಮೊದಲ ಮುದ್ರಣದಲ್ಲಿದ್ದದ್ದು ೬೮ ಕವಿತೆಗಳು, ಈಚಿನ ಸಮಗ್ರಕಾವ್ಯದಲ್ಲಿ ೪೯. ಅವುಗಳಲ್ಲಿ ಏಳನ್ನು ಇಲ್ಲಿ ಕೊಟ್ಟಿದೆ.

**೭. 'ಹೊಳೆಜೊಂಡು' ('ತ್ರಸ್ನೀಕ್')** ಪು. 59–66

ಇದೊಂದು ಪ್ರತ್ಯೇಕ ಸಂಗ್ರಹವಾಗಿ ಬರಬೇಕಾಗಿದ್ದದ್ದು ಬರಲಿಲ್ಲ. ಬದಲು ೧೯೪೦ರಲ್ಲಿ ಪ್ರಕಟವಾದ 'ಆರು ಪುಸ್ತಕಗಳಿಂದ' ('ಇಜ್ ಷೆಸ್ತಿ ಕ್ನಿಗ್') ಸಂಗ್ರಹದ ಮೊದಲ ಖಂಡವಾಗಿ, 'ವಿಲ್ಲೋ ಮರ' ('ಇವಾ') ಎಂದು ಹೆಸರು ಪಡೆದು ಹೊರಬಂದಿತು. ೧೯೬೧ರ ನಂತರದ ಪ್ರಕಟನೆಗಳಲ್ಲಿ ಆ ಹೆಸರು 'ತ್ರಸ್ನೀಕ್'ಗೆ ಬದಲಾಯಿತು. ಈ ಖಂಡದಲ್ಲಿ ೨೫ ಕವಿತೆಗಳಿವೆ. ಅವುಗಳಲ್ಲಿ ಐದನ್ನು ಆರಿಸಿಕೊಟ್ಟಿದೆ. ಈ ಸಂಗ್ರಹದ ಬೋರಿಸ್ ಪಾಸ್ತರ್‌ನಾಕ್‌ನ ಮೇಲೆ ಬರೆದ ಕವಿತೆಯನ್ನು ವಿಷಯದ ಏಕತೆಯ ದೃಷ್ಟಿಯಿಂದ ಅವನ ಮರಣಾನಂತರ ಬರೆದ ಇನ್ನೆರಡು ಕವಿತೆಗಳೊಂದಿಗೆ ಮುಂದಿನ 'ಸಪ್ತಮಗ್ರಂಥ' ವಿಭಾಗದಲ್ಲಿ ಕೊಟ್ಟಿರುವುದನ್ನು ಓದುಗರು ಗಮನಿಸಬೇಕು.

**೮. 'ಸಪ್ತಮಗ್ರಂಥ' ('ಸಿದ್ಮ್ಯಾಯಾ ಕ್ನಿಗಾ').** ಪು. 67–109

ಇದು ಸಹ ಹಿಂದಿನ 'ತ್ರಸ್ನೀಕ್'ನಂತೆ ಪ್ರತ್ಯೇಕ ಸಂಗ್ರಹವಾಗಿ ಬರಬೇಕಾಗಿತ್ತು. ಬದಲು ೧೯೬೫ರಲ್ಲಿ ಪ್ರಕಟವಾದ ಸಮಗ್ರಕಾವ್ಯ 'ಬೇಗ್ ವ್ರೆಮೇನಿ' ('ಕಾಲದ ಹರಿವು')ಯ ಒಂದು ಭಾಗವಾಗಿ ಪ್ರಕಟವಾಯಿತು. 'ಸಪ್ತಮಗ್ರಂಥ'ದಲ್ಲಿ ೧೪೬ ಕವಿತೆಗಳಿವೆ, ಅವುಗಳಲ್ಲಿ ೩೦ನ್ನು ಇಲ್ಲಿ ಕೊಟ್ಟಿದೆ.

**೯. 'ನಾಯಕನಿಲ್ಲದ ಕವಿತೆ' ('ಪೊಯೆಮಾ ಬೇಜ್ ಗೆರೋಯ')**

ಆಹ್ಮತೋವಾಳ ಕೃತಿಗಳಲೆಲ್ಲ ದೊಡ್ಡದು, ಸುಮಾರು ೩೫ ಪುಟಗಳಲ್ಲಿ ಚಾಚಿಕೊಂಡಿದೆ. ೧೯೪೦ ರಿಂದ ೧೯೬೨ರವರೆಗೆ ಇಪ್ಪತ್ತೆರಡು ವರ್ಷ ಬಿಟ್ಟು ಬಿಟ್ಟು ಇದರ ರಚನೆ ನಡೆಯುತ್ತಲೇ ಹೋಯಿತು. ಮೊದಲು ಪ್ರಕಟವಾದದ್ದು ಆಹ್ಮತೋವಾಳ ನಿಧನಾನಂತರ ಏಳು ವರ್ಷಗಳ ಮೇಲೆ ೧೯೭೩ರಲ್ಲಿ, ರಷ್ಯದ ಹೊರಗೆ ಡೆನ್ಮಾರ್ಕಿನ ಹೇಗ್‌ನಿಂದ. ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಇದರ ಯಾವದೇ ಭಾಗದ ಅನುವಾದ ಕೊಟ್ಟು ಪ್ರಯೋಜನವಿಲ್ಲವೆಂದು ಇಲ್ಲಿ ಇದನ್ನು ಕೈಬಿಟ್ಟಿದೆ.

**೧೦. ಮರಣೋತ್ತರ ಪ್ರಕಾಶಿತ ಕವಿತೆಗಳು**

'ಕ್ರಿಸ್ತೋತ್ತರ ೧೯೨೧'ರ ನಂತರ ಮತ್ತೆ ೧೯೪೦ರವರೆಗೆ ಸುಮಾರು ೧೯ ವರ್ಷಗಳ ಕಾಲ ದೇಶದಲ್ಲಿನ ಸಾಹಿತ್ಯಿಕ ಹಾಗೂ ರಾಜಕೀಯ ಪರಿಸ್ಥಿತಿಗಳಿಂದಾಗಿ ಆಹ್ಮತೋವಾಳಿಗೆ ಯಾವ ಹೊಸ ಸಂಗ್ರಹವನ್ನೂ ಪ್ರಕಟಿಸುವ ಸೌಲಭ್ಯವಿರಲಿಲ್ಲ. ಆ ನಡುವೆ ಹಾಗೂ ಮುಂದೆ ಜೀವಮಾನದ ಕೊನೆಯವರೆಗೂ ರಾಜಕೀಯದ ಬಿಗಿಮುಷ್ಟಿಯಲ್ಲಿ ತಾನೂ ಹಾಗೂ ರಷ್ಯದ ಜನತೆ ಅನುಭವಿಸಬೇಕಾಗಿ ಬಂದ ದುಃಖಕಷ್ಟಗಳನ್ನು ಕುರಿತು ಕಟುವಾದ ಕ್ರಾಂತಿಕಾರಕ ಕವಿತೆಗಳನ್ನು ರಚಿಸುತ್ತಿದ್ದಳು. ಮುಂದೆ ರಾಜಕೀಯಸ್ಥಿತಿಯಲ್ಲಿ ಬಿಗಿತ ಕಡಿಮೆಯಾದ

ಹೊತ್ತಿನಲ್ಲಲ್ಲ ಅವುಗಳಲ್ಲಿ ಕಡಿಮೆ ಕಟುವಾದವು ಪ್ರಕಟವಾಗುತ್ತಿದ್ದವು. ಹಾಗೆ ಪ್ರಕಟವಾಗದೆ ಉಳಿದವು ಅನೇಕ. ಮತ್ತೆ ಕೆಲವು ಸಣ್ಣಪುಟ್ಟವು ಅಷ್ಟು ಮುಖ್ಯವಲ್ಲವೆಂಬ ಕಾರಣದಿಂದಲೊ ಏನೊ, ಪತ್ರಿಕೆಗಳಲ್ಲಿ ಅಚ್ಚಾಗಿಯೂ ಸಂಕಲಿತವಾಗಲಿಲ್ಲ. ಈ ಎರಡೂ ಗುಂಪಿಗೆ ಸೇರಿದವುಗಳಲ್ಲಿ ಸುಮಾರು ಎಂಬತ್ತು ಅವಳ ನಿಧನಾನಂತರ ಈಚಿನ 'ಗ್ಲಾಸ್‌ನಸ್ತ್' ದಿನಗಳಲ್ಲಿ ಬೆಳಕು ಕಂಡಿವೆ. ಅವುಗಳಲ್ಲಿ ೨೦ ನ್ನು ಇಲ್ಲಿ ಕೊಟ್ಟಿದೆ. ಆದರೆ ಬೇರೆ ವಿಭಾಗವಾಗಿಯಲ್ಲ. ಕವಿತೆಯ ರಚನಾಕಾಲವನ್ನನುಸರಿಸಿ, ಅದು ಸುಮಾರು ಯಾವ ಸಂಗ್ರಹದಲ್ಲಿ ಸೇರಬೇಕಾಗಿತ್ತೊ ಅಲ್ಲಿ. ಅವುಗಳ ಪ್ರತ್ಯೇಕತೆಯನ್ನು ಗುರುತಿಸಲು ಕ್ರಮಸಂಖ್ಯೆಯನ್ನು ಚೌಕನೆಯ ಕಂಸಗಳಲ್ಲಿ ತೋರಿಸಿದೆ. ಉದಾಹರಣೆಗೆ, [೪೭] ಇತ್ಯಾದಿ.

### ೧೧. ಇತರವು

ಮೇಲೆ ಹೇಳಿದ ಸಂಗ್ರಹಗಳಲ್ಲದೆ ಆನಾಳ ಜೀವಮಾನದಲ್ಲಿ ಎರಡು ಬಾರಿ 'ಆಯ್ದ ಕವಿತೆಗಳು' (೧೯೪೩ ಮತ್ತು ೪೬), ನಾಲ್ಕು ಬಾರಿ 'ಸಮಗ್ರಕಾವ್ಯ'ಗಳು (೧೯೪೬, ೫೮, ೬೧ ಮತ್ತು ೬೫ರ 'ಬೇಗ್ ವ್ರೆಮೇನಿ') ಪ್ರಕಟವಾದವು. ಒಟ್ಟಾರೆ ಕಳೆದ ನಾಲ್ಕು ದಶಕಗಳಲ್ಲಿ ಅವಳ ಕವಿತೆಯ ಇಪ್ಪತ್ತಕ್ಕೂ ಹೆಚ್ಚು ಸಂಸ್ಕರಣಗಳು, ಒಂದೊಂದೂ ಎಂಬತ್ತು ಸಾವಿರದಿಂದ ಎರಡುಲಕ್ಷ ಪ್ರತಿಗಳವರೆಗೆ ಪ್ರಕಟವಾಗಿವೆ. ಅವೆಲ್ಲದರ ಒಟ್ಟು ಸಂಖ್ಯೆ ಹತ್ತು ಲಕ್ಷಕ್ಕೂ ಹೆಚ್ಚು.

ಸ್ವಂತದ ಕವಿತೆಗಳಲ್ಲದೆ, ಆಹ್ಮತೋವಾ ಜಗತ್ತಿನ ಇತರ ಭಾಷೆಗಳಿಂದ ಮಾಡಿದ ಕವಿತೆಗಳ ಅನುವಾದಗಳು 'ಕವಿಧ್ವನಿ' ('ಗೊಲೋಸಾ ಪೊಯೆತೋವ್') ಎಂಬ ಶೀರ್ಷಿಕೆಯಡಿ ೧೯೬೫ರಲ್ಲಿ ಪ್ರಕಟವಾಯಿತು. ರಷ್ಯದ ಹೊರಗೆ ಅವಳು ಮೆಚ್ಚಿದ ಕವಿಗಳಲ್ಲಿ ನಮ್ಮ ರವೀಂದ್ರನಾಥ ಠಾಕೂರರೂ ಒಬ್ಬರು.

### ಅನುಬಂಧಗಳು



### ಚಿತ್ರಗಳು

೧. ಮುಖಪುಟದ ಎದುರಿನದು : ಆನಾ ಆಹ್ಮತೋವಾ, ೧೯೨೫ರಲ್ಲಿ.
೨. ರಕ್ಷಾಪತ್ರದ ಹಿಂಬದಿಯದು : ೧೯೬೩ರ ಚಿತ್ರ. ಒಳಪುಟಗಳಲ್ಲಿ ಕಾಣಿಸಿಕೊಳ್ಳುವ ಸಣ್ಣ ಆಕಾರದ ರೇಖಾಚಿತ್ರ ಸಹ ಅದನ್ನೇ ಆಧರಿಸಿದ್ದು. ಇವುಗಳೆಲ್ಲದರ ಪುನರ್ರಚನೆ ಶ್ರೀ ರಂಜನ್ (ಸೇನ್‌ಗುಪ್ತ), ದಿಲ್ಲಿ. ಹಿಂಬದಿಯ ಪುಟದ ಚಿತ್ರದ ಕೆಳಮೂಲೆಯಲ್ಲಿ ಕೊಟ್ಟಿರುವುದು ಆಹ್ಮತೋವಾಳ ಹಸ್ತಾಕ್ಷರ.
೩. 'ಪ್ರಸ್ತಾವನೆ'ಯ XV ನೆ ಪುಟದ ಚಿತ್ರ ಇಟಲಿಯ ವಿಖ್ಯಾತ ಕಲಾವಿದ ಮೋದಿಗ್ಲ್ಯಾನಿ ೧೯೧೧ರಲ್ಲಿ ರಚಿಸಿದ್ದು.



## ಪ್ರಸ್ತಾವನೆ

# ಆನಾ ಆಹ್ಮತೋವಾ* : ಜೀವನ ಮತ್ತು ಸಾಧನೆ

ಆನಾ ಆಹ್ಮತೋವಾ ಈ ಶತಮಾನದ ರಷ್ಯದ – ಕೇವಲ ರಷ್ಯವೇ ಏಕೆ, ಇಡೀ ಜಗತ್ತಿನ – ಮಹಾಕವಿಗಳಲ್ಲಿ ಒಬ್ಬಳೆಂದು ಹೆಸರಾದವಳು. ೧೯೮೯ ಅವಳು ನೂರು ಮುಟ್ಟಿದ ವರ್ಷ. 'ಗ್ಲಾಸ್‌ನಸ್ತ್'ಗೆ ತೆರೆದುಕೊಂಡ ಇಂದಿನ ರಷ್ಯ ಅವಳ ಜನ್ಮಶತಾಬ್ದಿಯನ್ನು ಹತ್ತುಹಲವು ಬಗೆಯಲ್ಲಿ ಆಚರಿಸಿತು. ಯುನೆಸ್ಕೊ ಆ ವರ್ಷವನ್ನು 'ಆಹ್ಮತೋವಾಳ ವರ್ಷ'ವೆಂದೇ ಕರೆದು ಸಾರ್ವತ್ರಿಕ ಆಚರಣೆಗೆ ಕರೆಕೊಟ್ಟಿತ್ತು. ಪ್ರಾಯಶಃ ಅವಳಿಗೆ ಸಂದ ಅತಿ ದೊಡ್ಡ ಗೌರವವೆಂದರೆ ಆಕಾಶದಲ್ಲಿನ ಒಂದು ಗ್ರಹಕ್ಕೆ ಅವಳ ಹೆಸರನ್ನಿಟ್ಟದ್ದು. ಈ ಪಟ್ಟಿಗೆ ಸೇರಿಸಬಹುದಾದ ಇನ್ನೂ ಒಂದು ಸಂಗತಿ, ನೊಬೆಲ್ ಪಾರಿತೋಷಕ ವಿಜೇತ ಜೋಸೆಫ್ ಬ್ರಾದ್‌ಸ್ಕಿ ಅವಳ ಕಾವ್ಯಶಿಶು; ಕವಿತೆಯ ಮೊದಲ ಪಾಠಗಳನ್ನು ಅವಳಿಂದ ಕಲಿತು, ಅವಳ ಪರಂಪರೆಯಲ್ಲಿಯೇ ಮುಂದುವರಿದವನು.

ಬೋರಿಸ್ ಪಾಸ್ತರ್‌ನಾಕ್‌ನ 'ಡಾ. ಜಿವಾಗೊ' ಕಾದಂಬರಿ ೧೯೫೮ರಲ್ಲಿ ಇಂಗ್ಲಿಷಿಗೆ ಅನುವಾದವಾಗಿ ಬಂದಾಗ ಅದರಿಂದಾದ ಹಲವಾರು ಪ್ರಯೋಜನಗಳಲ್ಲಿ ಬಹುಮುಖ್ಯವಾದದ್ದೆಂದರೆ ಸ್ತಾಲಿನ್ ಸರಕಾರ ಅದುಮಿಟ್ಟಿದ್ದ ನಿಜವಾದ ಸ್ವತಂತ್ರ ಮನೋಭಾವದ ರಷ್ಯದ ಸಾಹಿತ್ಯದ ಕಡೆಗೆ ಜಗತ್ತಿನ ಗಮನ ಸೆಳೆದದ್ದು. ಅದಾದ ಮುಂದಿನ ಹತ್ತುವರ್ಷಗಳಲ್ಲಿ ಕೇಳಿಬಂದ ಹಲವಾರು ಧ್ವನಿಗಳಲ್ಲಿ ಪ್ರಮುಖವಾದದ್ದು ಅವನಿಗಿಂತ ವರ್ಷ ಹಿರಿಯಳೂ, ಅನೇಕ ದೃಷ್ಟಿಗಳಿಂದ ಇನ್ನೂ ಉತ್ತಮ ಕವಿಯೂ, ನಮ್ಮ ಕಾಲಕ್ಕೆ ಹೆಚ್ಚು ಸಂಬದ್ಧಳು ಆದ ಆಹ್ಮತೋವಾಳದು. ಮೊದಮೊದಲು ಬಿಡಿಬಿಡಿಯಾಗಿ,

* ಇದನ್ನು 'ಅಖ್ಮತೋವಾ' ಎಂದೂ ಉಚ್ಚರಿಸುವುದುಂಟು.

ನಂತರ ೧೯೬೯ರಲ್ಲಿ ಒಂದು ಸಣ್ಣ ಸಂಪುಟದಲ್ಲಿ ಅವಳ ಕವಿತೆಗಳನ್ನು ಮೊದಲು ಓದಿದಾಗ ನಮಗೆ ದಂಗು ಬಡಿದಂತಾಗಿತ್ತು. ಅಲ್ಲಿಂದೀಚೆಗೆ ಅವಳ ಅನುವಾದಗಳದ್ದೊಂದು ಹುಚ್ಚುಹೊಳೆ.

ಅರವತ್ತರ ದಶಕ ಕಾವ್ಯಪ್ರೇಮಿಗಳ ಪಾಲಿಗೆ ನಿಜವಾಗಿ ಒಂದು ಶಾಂತಕ್ರಾಂತಿಯ ಮನ್ವಂತರದ ಕಾಲವೇ ಸರಿ. ಪೌಂಡ್, ಎಲಿಯಟ್, ಆಡೆನ್, ಸ್ಪೆಂಡರ್‌ರಂತಹ ಬ್ರಿಟಿಷ್ ಮತ್ತು ಅಮೆರಿಕನ್ ಕವಿಗಳ ಕಾವ್ಯಪದ್ಧತಿಯೇ ಪರಮ, ಅದರಾಚೆಗೆ ಏನೂ ಇಲ್ಲ ಎಂದುಕೊಂಡು ಅವರನ್ನು ದೈವತ್ವಕ್ಕೇರಿಸಿದ್ದ ನಮಗೆ ಆ ದಶಕದಲ್ಲಿ, ಮುಖ್ಯವಾಗಿ ಪೆಂಗ್ವಿನ್ ಯುರೋಪೀಯ ಕವಿಗಳ ಅನುವಾದಮಾಲೆಯಲ್ಲಿ ಎದುರಾದ ಪ್ರತಿಭೆಗಳು ಅವೆಷ್ಟೋ. ಅವರ ಕಾವ್ಯದ ವಸ್ತು, ವಿಧಾನಗಳ ಪರಿಚಯ ನಮ್ಮ ಕಾವ್ಯರಚನೆಯ ಮೇಲೆ ನಮಗೆ ತಿಳಿಯದೆಯೇ ಅದೆಷ್ಟು ಪ್ರಭಾವ ಬೀರಿರಬಹುದು!

ಆನಾ ಆಹ್ಮತೋವಾ ಹುಟ್ಟಿದ್ದು ದಕ್ಷಿಣ ರಷ್ಯದ ಕಪ್ಪುಸಮುದ್ರದ ದಂಡೆಯ ಒದೆಸ್ಸಾ ನಗರದ ಬಳಿಯ ಒಂದು ಊರಿನಲ್ಲಿ. ತಂದೆ ವಿಶ್ರಾಂತ ನೌಕಾ ಇಂಜಿನಿಯರ್. ಆನಾ ಒಂದು ವರ್ಷದವಳಿರುವಾಗ ಪರಿವಾರ ಉತ್ತರದಂಚಿನ ಪೀಟರ್ಸ್‌ಬರ್ಗ್ (ರಷ್ಯಭಾಷೆಯಲ್ಲಿ 'ಪೀತರ್‌ಬೂರ್ಗ್', ಈಗ 'ಲೆನಿನ್‌ಗ್ರಾದ್') ಬಳಿಯ ತ್ಸಾರ್‌ಸ್ಕೋಯೆ ಸೆಲೋ ('ದೊರೆಯ ಹಳ್ಳಿ', ಈಗ 'ಪುಷ್ಕಿನ್')ದಲ್ಲಿ ಬಂದು ನೆಲಸಿತು. ಆನಾಳಿಗೆ ತ್ಸಾರ್‌ಸ್ಕೋಯೆ ಸೆಲೋವೂ ಸೇರಿದಂತೆ ಪೀಟರ್ಸ್‌ಬರ್ಗೇ ಹುಟ್ಟೂರಾಯಿತು.

ಪೀಟರ್ಸ್‌ಬರ್ಗ್ ಒಂದು ದಂತಕತೆಗಳ ನಗರ. ಇಡೀ ರಷ್ಯದಲ್ಲೇ ಅಂತಹ ನಗರ ಅದೊಂದೇ. ಅದನ್ನು ನಿರ್ಮಿಸಿದವನೊಬ್ಬ ಹುಚ್ಚದೊರೆ, ಮೊದಲನೆ ಪೀಟರ್. ಜಗತ್ತಿನ ಅನೇಕ ವೈಭವಗಳಿಗೆ ಅಂತಹ ಹುಚ್ಚರೇ ಕಾರಣ! ೧೭೦೩. ಯುರೋಪಿನ ಪ್ಯಾರಿಸ್, ರೋಮ್ ನಗರಗಳ ವೈಭವ ಜಗತ್ತಿನ ಕಣ್ಣುಕುಕ್ಕಿದ್ದ ಕಾಲದಲ್ಲಿ ರಷ್ಯದಲ್ಲಿ ಅವುಗಳನ್ನು ಮೀರಿಸುವ ನಗರವೊಂದೇಕೆ ಇರಬಾರದು ಎಂದು ಪೀಟರ್‌ಗೆ ಅನಿಸಿತು. ಯುರೋಪಿಗೆ ಹತ್ತಿರವಾಗಿ (ಪೀಟರ್ಸ್‌ಬರ್ಗ್ ಮಾಸ್ಕೋಗಿಂತ ಫಿನ್‌ಲೆಂಡ್‌ನ ಹೆಲ್ಸಿಂಕಿಗೆ ಹತ್ತಿರ) ಸಮುದ್ರದಂಚಿನಲ್ಲಿ ಒಂದು ಜಾಗ ಹುಡುಕಿದ. ನೀವಾ ನದಿ ಸಮುದ್ರ ಕೂಡುವ ಕಡೆ ಒಂದು ವಿಶಾಲ ಜೌಗುನೆಲ. ನೆರೆ ಬಂದಾಗ ನಗರದ ಹೊರವಲಯ ನೀರಿನಲ್ಲಿ ಮುಳುಗುವುದು ಈಗಲೂ ಅಲ್ಲಿ ತಪ್ಪಿದ್ದಲ್ಲ. ಪೀಟರ್ ಅಲ್ಲಿ ನೆಲದ ಮೇಲೆ ಒಂದು ಶಿಲುಬೆಯ ಗುರುತು ಹಾಕಿದ. ಇಡೀ ನಗರ ಇಲ್ಲಿ ಕಲ್ಲಲ್ಲಾಗಬೇಕು ಎಂದ. ಯುರೋಪಿನ ಬೇರೆಬೇರೆ ಕಡೆಗಳಿಂದ ಹೆಸರಾಂತ ಶಿಲ್ಪಿಗಳೂ ವಾಸ್ತುಶಿಲ್ಪಿಗಳೂ ಬಂದರು. ಬಣ್ಣಬಣ್ಣದ ಅಮೃತಶಿಲೆ ಆಮದಾಯಿತು. ಪ್ಯಾರಿಸ್, ರೋಮ್‌ಗಳಿಗೆ ಪೈಪೋಟಿಯಾಗಿ ನಗರ ತಲೆಯೆತ್ತಿತು. ಬಗೆಬಗೆಯ ಅರಮನೆಗಳಾದವು, ಪಾರ್ಕುಗಳಾದವು, ಕಾರಂಜಿಗಳಾದವು, ಕಂಚು, ಅಮೃತಶಿಲೆಗಳ ಶಿಲ್ಪಗಳು ನಗರವನ್ನು ಅಲಂಕರಿಸಿದವು. ನೀವಾ ನದಿಯ ದಂಡೆಯ ಉದ್ದಕ್ಕೂ ಸೋಪಾನಗಳಾದವು. ಸುತ್ತುಮುತ್ತಿನ ದ್ವೀಪಗಳನ್ನು ಮುಟ್ಟಲು ೪೮೦ ಸೇತುವೆಗಳಾದವು). ಅದನ್ನು ಕಟ್ಟುವಾಗ ಆ ಜೌಗುನೆಲದಲ್ಲಿ ಜೀವತೆತ್ತ ಕಾರ್ಮಿಕರ ಸಂಖ್ಯೆ ಎರಡುಲಕ್ಷ! ನಿರ್ಮಾಪಕನ ಹೆಸರು ತಾಳಿ ನಗರ 'ಪೀತರ್‌ಬೂರ್ಗ್' ಆಯಿತು. ಆ ಹೆಸರಿನಲ್ಲಿನ 'ಬೂರ್ಗ್' ಸಹ ಜರ್ಮನ್ ಭಾಷೆಯ 'ಬರ್ಗ್'ನಿಂದ

ಬಂದದ್ದು. ಪೀಟರ್ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡ. ಮಾಸ್ಕೋದ ಶ್ರೀಮಂತರನ್ನೆಲ್ಲ ಅಟ್ಟಿತಂದು, ಅವರಿಗೆ ಅಲ್ಲಿ ಕಲ್ಲಿನ ಮನೆ ಕಟ್ಟಿಕೊಳ್ಳಿರೆಂದ. ನಗರ – ನಿರ್ಮಾಣವನ್ನೊಪ್ಪದ ಹೆಂಡತಿ ಯೂದೊಕ್ಸಿಯಾಳೊಂದಿಗೆ ವಿಚ್ಛೇದನಮಾಡಿಕೊಂಡಿದ್ದ ಭೂಪ ಅವನು. ಪುಸ್ತಕ ಭಂಡಾರಗಳು, ಕಲಾಭವನಗಳು, ವಸ್ತುಸಂಗ್ರಹಾಲಯಗಳು ಸ್ಥಾಪಿತವಾದವು. ಯುರೋಪಿನ ಬೇರೆ ಬೇರೆ ಕಡೆಗಳಿಂದ ವಿದ್ವಾಂಸರು, ಪ್ರಾಧ್ಯಾಪಕರು ಬಂದರು. ಕವಿ ಪುಷ್ಕಿನ್ ಹೇಳಿದಂತೆ 'ಅದರ ಮುಂದೆ ಮಾಸ್ಕೊ ವಿಧವೆಯಂತೆ ಕಾಣತೊಡಗಿತ್ತು!' ಪುಷ್ಕಿನ್ ಅಲ್ಲದೆ ಪೀಟರ್ಸ್‌ಬರ್ಗ್‌ನಲ್ಲಿ ಬೆಳೆದು ಬಾಳಿದ ಪ್ರಖ್ಯಾತ ಕವಿ ಸಾಹಿತಿಗಳೆಂದರೆ ಗೋಗೊಲ್, ಲೆರ್ಮೊಂತೋವ್, ತಾಲ್‌ಸ್ತಾಯ್, ಬ್ಲೋಕ್, ಮುಂದೆ ಅಹ್ಮತೋವಾ, ಮ್ಯಾಂದಲ್‌ಷ್ತಾಮ್, ಇನ್ನೂ ಎಷ್ಟೋ. ಹೀಗೆಯೇ ಸಕಲ ಕಲಾವಿದರೂ ಅಸಂಖ್ಯ. ಮುಂದೆ ಎರಡು ಬಾರಿ ನಗರದ ಹೆಸರು ಬದಲಾಯಿತು. ಎರಡನೆ ನಿಕೊಲಸ್ ದೊರೆ ಅದರ ಜರ್ಮನ್ ಪ್ರತ್ಯಯದ ಬದಲು ರಷ್ಯದ 'ಗ್ರಾದ್' ಸೇರಿಸಿ 'ಪೆತ್ರೊಗ್ರಾದ್' ಮಾಡಿದ. ಹತ್ತು ವರ್ಷಗಳ ಮೇಲೆ ಲೆನಿನ್‌ನ ನಿಧನಾನಂತರ 'ಪೆತ್ರೊಗ್ರಾದ್' ಹೋಗಿ 'ಲೆನಿನ್‌ಗ್ರಾದ್' ಆಯಿತು. ಆಗ ಯಾರೋ ರಷ್ಯದ ಉಚ್ಚಅಧಿಕಾರಿಯೊಬ್ಬನನ್ನು "ನಗರದ ಹೆಸರು ಬದಲಾಯಿಸಿದ್ದೇಕೆ?'' ಎಂದು ಕೇಳಿದ್ದಕ್ಕೆ ಅವನು "ಈ ನಗರಕ್ಕಿಂತ ಮಹಾನಗರವಿಲ್ಲ, ಲೆನಿನ್‌ಗಿಂತ ಮಹಾವ್ಯಕ್ತಿಯಿಲ್ಲ. ಅವನಿಗೆ ಇದರ ಹೊರತು ಬೇರೆ ಸ್ಮಾರಕ ಎಲ್ಲಿ ತರೋಣ!'' ಎಂದನಂತೆ.

ಪೀಟರ್ಸ್‌ಬರ್ಗ್ ಬರಿಯ ಒಂದು ನಗರವಲ್ಲ, ಅದೊಂದು ಮನೋಭಾವ, ಒಂದು ಸಂಸ್ಕೃತಿ. ಕಾವ್ಯದಲ್ಲಿ ಸಹ ಅದರದ್ದು ತನ್ನದೇ ಬೇರೆ ಮಾರ್ಗ. ಆ ನಗರ ಆನಾಳ ಅಂತಃಚೇತನವನ್ನು ಅರಳಿಸಿ, ಅವಳ ಕಾವ್ಯಜೀವನಕ್ಕೆ ಹಿನ್ನೆಲೆ ಒದಗಿಸಿ, ಕವಿತೆಯ ಒಂದು ಅವಿಭಾಜ್ಯ ಅಂಗವಾದದ್ದು ಆಶ್ಚರ್ಯವೇನಲ್ಲ. ಮುಂದೆ ಅವಳು ಮತ್ತೆ ಮತ್ತೆ ತನ್ನ ಮತ್ತು ಆ ನಗರದ ಭಾವಬಂಧನವನ್ನು ಅನೇಕ ಕವಿತೆಗಳಲ್ಲಿ ತೋಡಿಕೊಂಡದ್ದುಂಟು (ಕ. ೨೧, ೨೩, ೫೨, ೫೯, ೬೫, ೬೬, ೬೭ ಇತ್ಯಾದಿ).

ಆನಾಳ ಮನೆಯ ವಾತಾವರಣ ಒಬ್ಬ ಭಾವೀಕವಿಗೆ ಮಾಡಿದ್ದಲ್ಲ. ಮನೆಯಲ್ಲಿ ಪುಸ್ತಕಗಳ ಹೆಸರಿಲ್ಲ. ತಾಯಿ ಆಗಾಗ ನೆನಪಿನಿಂದ ನೆಕ್ರಸೋವ್ ಮತ್ತು ದೆರ್ಷವಿನ್‌ರ ಕವಿತೆಗಳನ್ನು ಮಗಳಿಗೆ ಓದಿ ಹೇಳುತ್ತಿದ್ದಳು. ಮನೆಯಲ್ಲಿ ಮುಂದಿನ ಮುರಿಗಡೆಗೆ ಪೂರ್ವಭಾವಿಯಾಗಿ ತಂದೆತಾಯಿಯರ ನಡುವೆ ಮನಸ್ತಾಪ ಬೇರೆ. ಮಕ್ಕಳನ್ನು ಕ್ಷಯರೋಗ ಕಾಡುತ್ತಿದ್ದು ಆನಾಳ ಒಬ್ಬ ತಂಗಿಯಾಗಲೇ ಅದರಿಂದ ತೀರಿಕೊಂಡಿದ್ದಳು. ಮುಂದೆ ಅಕ್ಕನೂ ಅದಕ್ಕೆ ಬಲಿಯಾದಳು, ಜೀವಮಾನಪೂರ್ತಿ ಆನಾಳನ್ನೂ ಅದು ಕಾಡಿತು. ಮನೆ ಒದಗಿಸಲಾರದೆ ಹೋದ ಬೌದ್ಧಿಕ ವಾತಾವರಣವನ್ನು ಆನಾ ಮನೆಯ ಹೊರಗಡೆ ಹಾಗೂ ತಾನು ಓದುತ್ತಿದ್ದ ಗ್ರಾಮರ್ ಶಾಲೆಯಲ್ಲಿ ಕಂಡುಕೊಂಡಳು. ಬಾಲ್ಯ ದಲ್ಲಿಯೇ ಸುತ್ತುಮುತ್ತಿನ ಮಕ್ಕಳೊಂದಿಗೆ ಬೆರೆತು ಫ್ರೆಂಚ್ ಕಲಿತಳು. ಹನ್ನೊಂದನೆಯ ವಯಸ್ಸಿಗಾಗಲೇ ಕವಿತೆ ಕುರುಕಲು ಷುರುಮಾಡಿದಳು. ಹದಿಮೂರರ ಹೊತ್ತಿಗೆ ಬಾದ್ಲೇರ್, ವರ್ಲೇನ್ ಮುಂತಾದ ಪ್ರಮುಖ ಫ್ರೆಂಚ್ ಕವಿಗಳ ಕವಿತೆಗಳನ್ನು ಓದಿಕೊಂಡಿದ್ದಳು. ಊರಿನಲ್ಲಿ ಅವಳಂತಹ ಇನ್ನೂ ಅನೇಕ ಯುವಕವಿಗಳಿದ್ದರು. ಅವರಲ್ಲಿ ಅವಳಿಗಿಂತ

ಮೂರು ವರ್ಷ ಹಿರಿಯನಾದ ನಿಕೊಲಯ್ ಗುಮಿಲ್ಯೊವ್ ಒಬ್ಬ. ಶ್ರೀಮಂತ ಮನೆತನದವನು. ಆನಾ ಹದಿನಾಲ್ಕು ವರ್ಷದವಳಿದ್ದಾಗ ಅವನ ಪರಿಚಯವಾಯಿತು. ಆನಾ ಬರಿಯ ಕವಿಯೇ ಅಲ್ಲ, ಸುಂದರಿ ಸಹ. ಅವನು ಅವಳಲ್ಲಿ ಮೋಹಗೊಂಡ.

ಆನಾ ಕವಿತೆ ಬರೆಯುತ್ತಿದ್ದದ್ದು ಎಲ್ಲರಿಗೂ ಗೊತ್ತಿತ್ತು. ಒಮ್ಮೆ ಅವಳ ಕವಿತೆಗಳು ತಂದೆ ಗೊರೆಂಕೋನ ಕಣ್ಣಿಗೆ ಬಿದ್ದವು. "ಇಂತಹ ಕವಿತೆಗಳನ್ನು ಬರೆದು ಮನೆತನದ ಹೆಸರು ಕೆಡಿಸಬೇಡ'' ಎಂದು ಅವನು ಅತೃಪ್ತಿ ಸೂಚಿಸಿದ. ಆನಾ ಜಿದ್ದಿನ ಹುಡುಗಿ, ಯಾರಿಗೂ ಸೊಪ್ಪುಹಾಕುವವಳಲ್ಲ. ಹಾಗಾದರೆ ನಿನ್ನ ಮನೆತನದ ಹೆಸರು ನಿನಗೇ ಇರಲಿ ಎಂದು ತನ್ನ 'ಗೊರೆಂಕೋ' ಕುಲನಾಮವನ್ನು ತೊರೆದು, ಬದಲು ತಾತರ್ ಬುಡಕಟ್ಟಿಗೆ ಸೇರಿದ ಯಾವಳೋ ಮುತ್ತಜ್ಜಿಯ ಹೆಸರಿನ ಮೇಲೆ 'ಆಹ್ಮತೋವಾ' ಎಂದು ನಾಮಕರಣ ಮಾಡಿಕೊಂಡಳು. ಆ ಮುತ್ತಜ್ಜಿ ಇತಿಹಾಸದಲ್ಲಿ 'ಚಿನ್ನದ ದಂಡು' ('ದಿ ಗೋಲ್ಡನ್ ಹೋರ್ಡ್') ಎಂದು ಹೆಸರಾದ ಮಂಗೋಲರ ದೊರೆ ಖಾನ್ 'ಅಖ್ಮತ್'ನ ವಂಶಕ್ಕೆ ಸೇರಿದವಳಂತೆ. ಮುಂದೆ ಈ ಹೆಸರುಗಳ ಬದಲಾವಣೆ – ತನ್ನದು ಹಾಗೂ ತನ್ನ ಪೀಟರ್ಸ್‌ಬರ್ಗ್‌ನದು – ಅವಳ ಮನಸ್ಸನ್ನು ಗಾಢವಾಗಿ ಕಲಕಿ, ಆ ಭಾವನೆ ಕವಿತೆಗಳಲ್ಲಿ ಸಮರ್ಥವಾಗಿ ಪ್ರಕಟವಾದವು (ಕ. ೬೬, ೬೭ ಮತ್ತು ೯೦).

ಈ ನಡುವೆ ಜಪಾನಿನೊಂದಿಗೆ ಯುದ್ಧವಾಗಿ ಅದರಲ್ಲಿ ರಷ್ಯ ಸೋತಿತ್ತು. ೧೯೧೭ರ ಮಹಾಕ್ರಾಂತಿಗೆ ಪೂರ್ವರಂಗವಾಗಿ ತ್ಸಾರ್‌ನ ವಿರುದ್ಧ ಒಂದು ಸಣ್ಣ ಕ್ರಾಂತಿಯಾಗಿ ಅದು ವಿಫಲವಾಗಿತ್ತು. ಈ ಎರಡರಲ್ಲೂ ಸಹಸ್ರಾರು ಜನ ಸತ್ತು, ಆನಾಳ ಎಳೆಮನಸ್ಸಿನ ಮೇಲೆ ದುರಂತ ದುಃಖದ ಬರೆಯೆಳೆದು ಹೋಗಿತ್ತು. ಇದೇ ಹೊತ್ತಿಗೆ ತಂದೆತಾಯಿಯರ ವಿವಾಹ ವಿಚ್ಛೇದನೆಯಾಯಿತು. ತಾಯಿ ಮಕ್ಕಳೊಂದಿಗೆ ಮತ್ತೆ ದಕ್ಷಿಣಕ್ಕೆ ಬಂದು ನೆಲಸಿದಳು. ಕಡುಬಡತನದ ದಿನಗಳವು. ಆನಾ ದಕ್ಷಿಣದ ಕೀವ್‌ನಲ್ಲಿಯೇ ಗ್ರಾಮರ್‌ಶಾಲೆ ಮುಗಿಸಿ ಲ್ಯಾಟಿನ್ ಮತ್ತು ಕಾನೂನಿನ ಅಧ್ಯಯನ ಮಾಡತೊಡಗಿದಳು. ಕಾವ್ಯರಚನೆ ಅವಿರತ ಮುಂದುವರಿದಿತ್ತು. ಪ್ಯಾರಿಸ್‌ನಿಂದ ಪ್ರಕಟವಾಗುತ್ತಿದ್ದ ರಷ್ಯಭಾಷೆಯ 'ಸಿರಿಯೂಸ್' ಪತ್ರಿಕೆಯಲ್ಲಿ ಆನಾಳ ಮೊದಲ ಕವಿತೆ ಪ್ರಕಟವಾಗಿ ಎಲ್ಲರ ಗಮನ ಸೆಳೆಯಿತು.

ಗುಮಿಲ್ಯೊವ್ ಆನಾಳ ಕಾವ್ಯಪ್ರತಿಭೆ ಬೆಳೆದಷ್ಟೂ ಅವಳಿಗೆ ಹೆಚ್ಚು ಹೆಚ್ಚು ಒಲಿದು ಬೆನ್ನುಬಿದ್ದಿದ್ದ. ಆನಾಳಿಗೆ ಆ ಪ್ರೇಮ ಇಷ್ಟವಿರಲಿಲ್ಲ, ಅವನು ಬಿಡಲೊಲ್ಲ. ಕೆಲವಾರು ಬಾರಿ ಆತ್ಮಹತ್ಯೆಗೆ ಪ್ರಯತ್ನಿಸಿ ಎರಡು ಸಲವಂತೂ ಸತ್ತು ಬದುಕಿದ್ದ. ಕೊನೆಗೆ ಆನಾ ಒಪ್ಪಿದಳು. ೧೯೧೦ರಲ್ಲಿ ಮದುವೆಯೂ ಆಯಿತು. ಆ ಮದುವೆಗೆ ಆನಾಳ ಮನೆಯವರಾರೂ ಬಂದಿರಲಿಲ್ಲ. ಆನಾ ಗುಮಿಲ್ಯೊವ್‌ನೊಂದಿಗೆ ಪೀಟರ್ಸ್‌ಬರ್ಗ್‌ಗೆ ಬಂದು ನೆಲಸಿದಳು. ಅವನ ಜತೆ ಪ್ಯಾರಿಸ್ ಪ್ರವಾಸ ಮಾಡಿಬಂದಳು. ಅಲ್ಲಿ ಈಗ ಪಿಕಾಸೋಗೆ ಸರಿಸಮನಾಗಿ ವಿಶ್ವವಿಖ್ಯಾತನಾಗಿರುವ ಮೋದಿಗ್ಲ್ಯಾನಿಯ ಪರಿಚಯವಾಗಿ ಗಾಢಸ್ನೇಹ ಬೆಳೆಯಿತು. ಆಗ ಅವನೊಬ್ಬ ಬಡ ಕಲಾವಿದ. ಆನಾಳ ಹದಿನಾರು ರೇಖಾಚಿತ್ರಗಳನ್ನು ರಚಿಸಿದ. ಅವುಗಳಲ್ಲಿ ಉಳಿದ ಕೊನೆಯ ಒಂದೇ ಒಂದು ಕೊನೆಗಾಲದವರೆಗೂ ಆನಾಳ ಕೋಣೆಯ ಗೋಡೆಯನ್ನು ಅಲಂಕರಿಸಿತ್ತು.






**ಆನಾ ಆಹ್ಮತೋವಾ**

ಮೋದಿಗ್ಲ್ಯಾನಿಯ ರೇಖಾಚಿತ್ರ, ೧೯೧೧.

ರಷ್ಯದ ಸಾಹಿತ್ಯವೆಂದೊಡನೆ ಥಟ್ಟನೆ ನಮ್ಮ ಮನಸ್ಸಿಗೆ ಬರುವುದು ಅಲ್ಲಿನ ಕತೆಕಾದಂಬರಿಗಳ ಸಾಹಿತ್ಯ. ದೋಸ್ತೊವಸ್ಕಿ, ತಾಲ್‌ಸ್ತಾಯ್, ಚೆಕೋವ್, ಗಾರ್ಕಿ, ಹಾಗೂ ಕೊಂಚಮಟ್ಟಿಗೆ ಗೋಗೋಲ್, ತುರ್ಗಿನೀವ್ ಕಳೆದ ಅರ್ಧಶತಮಾನದಿಂದಲೂ ಕನ್ನಡಕ್ಕೆ ಅನುವಾದವಾಗುತ್ತ ಬಂದು ನಮಗೆ ಬಳಕೆಯಾಗಿದ್ದಾರೆ. ಅನುವಾದ, ಪರಿಚಯಗಳ ಕೊರತೆಯಿಂದಾಗಿ ಆ ಸಾಹಿತ್ಯ ಕತೆಕಾದಂಬರಿಗಳಷ್ಟೇ ಕಾವ್ಯದಿಂದಲೂ ಸಮೃದ್ಧವಾಗಿದೆ ಯೆಂಬುದು ನಮ್ಮ ತಿಳಿವಳಿಕೆಗೆ ಹೊರಗುಳಿದ ವಿಷಯ. ಗೋಗೋಲ್‌ನ ಹೊರತು ಉಳಿದೆಲ್ಲ ಕತೆಕಾದಂಬರಿಗಾರರು ಮೇಲೆಬರುವ ಮೊದಲೇ ಪುಷ್ಕಿನ್ ಹಾಗೂ ಅವನ ನಂತರ ಲೆರ್ಮೊಂತೋವ್ ಅತ್ಯುತ್ತಮ ಕಾವ್ಯ ರಚಿಸಿ ರಷ್ಯದ ಕಾವ್ಯದ 'ಸುವರ್ಣಯುಗ'ವನ್ನುಂಟುಮಾಡಿಹೋಗಿದ್ದರು. ಅವರ ನಂತರ ಕತೆಕಾದಂಬರಿಗಳ ಮೇಲ್ತನದಲ್ಲಿ ಹಿಂದೆ ಬಿದ್ದಿದ್ದ ಕಾವ್ಯ ಮತ್ತೊಮ್ಮೆ ಅವನ್ನು ಬದಿಗೊತ್ತಿ ಮೇಲೆದ್ದು ಈಗ 'ಸುವರ್ಣಯುಗ'ದ ನಂತರ 'ರಜತಯುಗ'ಕ್ಕೆ ಸಿದ್ಧತೆ ಮಾಡಿಕೊಳ್ಳತೊಡಗಿತ್ತು. ಶುಭಸಂಯೋಗವೆಂದರೆ ಈ ಯುಗಾರಂಭವಾದದ್ದು ಆನಾ ಹುಟ್ಟಿದ ಸುಮಾರಿಗೆ, 'ಸಿಂಬಲಿಸಂ'ನಿಂದ. ಈ ರಜತಯುಗ ಮುಂದಿನ ಮೂವತ್ತು ವರ್ಷಗಳ ಕಾಲ, ಸಾಹಿತಿಗಳು ತಾವಾಗಿಯೇ ಬಾಲ್ಷವಿಕ್ ಸರಕಾರದ ಊಳಿಗತನಕ್ಕೆ ತಮ್ಮನ್ನು ತಾವು ಒಪ್ಪಿಸಿಕೊಳ್ಳುವ ವರೆಗೆ ಬಗೆಬಗೆಯಾಗಿ ವಿಕಸನಗೊಂಡು ಅಲೆಕ್ಸಾಂದರ್ ಬ್ಲೋಕ್, ಆಹ್ಮತೋವಾ, ಪಾಸ್ತರ್‌ನಾಕ್, ಮ್ಯಾಂದಲ್‌ಷ್ತಾಮ್, ತ್ಸ್ವೆತಯೇವಾ, ಮಾಯಕೊವಸ್ಕಿ, ಯೆಸೆನಿನ್ ಮುಂತಾದ ಹಲವಾರು ಮಹಾಪ್ರತಿಭೆಗಳನ್ನು ಜಗತ್ತಿಗೆ ನೀಡಿತು.

ಆನಾಳ ಕಾವ್ಯಪ್ರತಿಭೆ ಪ್ರಕಟವಾಗತೊಡಗಿದ ಕಾಲದಲ್ಲಿ ಪೀಟರ್ಸ್‌ಬರ್ಗ್ ಸಮಾಜದಲ್ಲಿ ಕವಿತೆಗೆ ಉನ್ನತ ಸ್ಥಾನವಿತ್ತು. ಅಂತಹ ಸ್ಥಾನ ಪ್ಯಾರಿಸ್‌ನಲ್ಲಿ ಫ್ರೆಂಚ್ ಕವಿತೆಗೆ ಸಹ ಇರಲಿಲ್ಲ. ಅಲ್ಲಿ ಚಿತ್ರಕಲೆ ಕವಿತೆಯನ್ನು ನುಂಗಿಹಾಕಿದೆಯೆಂದು ಅಲ್ಲಿಗೆ ಹೋಗಿಬಂದಿದ್ದ ಆನಾಳೇ ಗೋಳಾಡಿದ್ದಳು. ಆದರೂ ಫ್ರೆಂಚ್‌ನ ಬಾದ್ಲೇರ್, ವರ್ಲೇನ್‌ರ ಸಿಂಬಲಿಸ್ಟ್ (ಪ್ರತೀಕವಾದಿ) ಕಾವ್ಯಪದ್ಧತಿ ಅದೇ ಆಗ ಕಟ್ಟುನಿಟ್ಟಿನ ಕ್ಲಾಸಿಸಿಸಂನ ಬಿಗಿಮುಷ್ಟಿಯಿಂದ ಬಿಡಿಸಿಕೊಂಡು ಹೊರಬರುತ್ತಿದ್ದ ರಷ್ಯದ ಕಾವ್ಯದ ಮೇಲೆ ಪ್ರಬಲವಾದ ಪರಿಣಾಮ ಬೀರಿತ್ತು. ಸಿಂಬಲಿಸ್ಟ್ ಕಾವ್ಯ ರಷ್ಯದಲ್ಲಿ ಪ್ರಚಲವಾದಂತೆ ಅದೊಂದು ರಹಸ್ಯ ಚಳವಳಿಯೋ ಎಂಬ ಮಟ್ಟಕ್ಕೆ ಹೋಗಿತ್ತು. ಅದಕ್ಕೆ 'ಧರ್ಮಗುರು'ವೂ ಒಬ್ಬನಿದ್ದ – ವ್ಯಾಚೆಸ್ಲಾವ್ ಇವನೋವ್. ಪ್ರತಿ ಬುಧವಾರ ಅವನ ಮನೆಯಲ್ಲಿ ಎಲ್ಲರೂ ಸೇರುತ್ತಿದ್ದರು. ಅವನು ಒಬ್ಬೊಬ್ಬರ ಕವಿತೆಯನ್ನೂ ವಿಶ್ಲೇಷಿಸಿ, ಸಿಂಬಲಿಸ್ಟ್ ಕಾವ್ಯದ 'ಧರ್ಮಸೂಕ್ಷ್ಮ'ಗಳನ್ನು ವಿವರಿಸಿ ಹೇಳುತ್ತಿದ್ದ. ಸಿಂಬಲಿಸ್ಟರು ತರ್ಕ, ವಿಚಾರವಾದಗಳ ವಿರೋಧಿಗಳು. ಅವರಿಗೆ ಅನುಭಾವ ಅಥವಾ ರಹಸ್ಯವಾದ (ಮಿಸ್ಟಿಸಿಸಂ) ಮುಖ್ಯ. ಕವಿ ಒಬ್ಬ ಅನುಭಾವಿ. ಅರ್ಥಾತ್ ಅನುಭಾವಿಯಲ್ಲದವನು ಕವಿಯಾಗಲಾರ. ಅನುಭಾವವನ್ನು ಮಾತಿನಿಂದಲ್ಲ, ಅನುಭವಿಸಿ ಸಾಧಿಸಬೇಕು. ಅನುಭಾವಿಯ ಅಂತರ್ದರ್ಶನಗಳಿಗೆ ಮಾಧ್ಯಮ ಕವಿತೆ. ಅವನು ಅದನ್ನು ಪ್ರತೀಕದ ಭಾಷೆಯಲ್ಲಷ್ಟೇ ಸೂಚಿಸಬಲ್ಲ.

ಗುಮಿಲ್ಯೊವ್ ಮತ್ತು ಅವನ ಕವಿಮಿತ್ರರಿಗೆ ಸಿಂಬಲಿಸಂನ ರಹಸ್ಯವಾದ ಏನೇನೂ ಹಿಡಿಸಿರಲಿಲ್ಲ. ಒಮ್ಮೆ ಒಂದು 'ಬುಧವಾರದ ಸಭೆ'ಯಲ್ಲಿ ಇವನೋವ್ ಗುಮಿಲ್ಯೊವ್‌ನ ಕವಿತೆಯೊಂದನ್ನು ಕಟುವಾಗಿ ಟೀಕಿಸಿ ತಿರಸ್ಕರಿಸಿದ. ಗುಮಿಲ್ಯೊವ್ ಆ ಗುಂಪಿನಿಂದ ಹೊರಬಂದು ತನ್ನದೇ ಬೇರೆ 'ಕವಿಕೂಟ' ('ತ್ಸೆಹ್ ಪೊಯೆತೋವ್', 'ಪೊಯೆಟ್ಸ್ ಗಿಲ್ಡ್') ಸ್ಥಾಪಿಸಿದ. ಮೊದಮೊದಲು ಹದಿನೈದು ಸದಸ್ಯರಿದ್ದರು. ಅವರಲ್ಲಿ ಆನಾ ಅಹ್ಮತೋವಾ ಹಾಗೂ ಮ್ಯಾಂದಲ್‌ಷ್ತಾಮ್ ಪ್ರಮುಖರು. ಎಲ್ಲರೂ ಸೇರಿ ಒಂದು ಹೊಸ ಸಾಹಿತ್ಯ ಚಳವಳಿಯನ್ನೇ ಶುರುಮಾಡಿದರು. ಅದಕ್ಕೆ 'ಆಕ್ಮೇಯಿಸಂ' ಎಂದು ಹೆಸರಾಯಿತು. 'ಆಕ್ಮೆ' ಮೂಲತಃ ಗ್ರೀಕ್ ಶಬ್ದ; ಗ್ರೀಕ್ ಹಾಗೂ ಇಂಗ್ಲಿಷ್‌ಗಳಲ್ಲಿ ಅದಕ್ಕೆ 'ತುತ್ತತುದಿ' ಎಂದರ್ಥ. ಆದರೆ ರಷ್ಯಭಾಷೆಯಲ್ಲಿ ಆ ಶಬ್ದವೇ ಇಲ್ಲ. ನಾಮಕರಣ ಮಾಡಿದವನು ಗುಮಿಲ್ಯೊವ್, ಅಹ್ಮತೋವಾಳ ಹೆಸರಿನ ಮೇಲೆ ಎಂದು ಪ್ರತೀತಿ. ಆಗ ಪ್ರಕಟವಾಗುತ್ತಿದ್ದ 'ಅಪೊಲೋನ್' ಎಂಬ ಸಾಹಿತ್ಯಪತ್ರಿಕೆ ಆಕ್ಮೆಯಿಸಂನ ಮುಖಪತ್ರವಾಯಿತು.

'ಆಕ್ಮೆಯಿಸಂ' ಎಂದರೇನು? ಅದನ್ನು ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ವಿವರಿಸಲು ಪ್ರಯತ್ನಿಸಿದ್ದರೂ ಅದರ ಪ್ರಧಾನಧ್ಯೇಯವೆಂದರೆ ಸಿಂಬಲಿಸಂನ ಅನುಭಾವವನ್ನು ತೊರೆದು ಮತ್ತೆ ನೆಲಕ್ಕೆ ಮರಳುವುದು. ಸಿಂಬಲಿಸಂನಲ್ಲಿ ಕಂಡುಬರದ ಭಾಷೆಯ ಸ್ವಪ್ರಭುತ್ವ (ಅಟಾನಮಿ), ಭಾಷೆಯ ಆಳದಲ್ಲಡಗಿದ ಧ್ವನಿ, ತರ್ಕ, ಶಿಲ್ಪಗಳನ್ನರಿತು, ಅದರ ಕುಶಲವಾದ ಹಿತಮಿತವಾದ ಬಳಕೆ, ಅರ್ಥದ ಸ್ಪಷ್ಟತೆ, ನೇರವಾದ ಕಥನಶೈಲಿ – ಅದರ ಮುಖ್ಯ ಗುಣಲಕ್ಷಣಗಳು. ಇವು, ಮತ್ತೆ ಇನ್ನೂ ಅನೇಕವು ಆನಾಳ ಕವಿತೆಯಲ್ಲಿ ವಿಪುಲವಾಗಿದ್ದವು. ಎಲ್ಲ ದೃಷ್ಟಿಗಳಿಂದಲೂ ಅವಳು ಆಕ್ಮೆಯಿಸಂನ ಸಮರ್ಥ ಪ್ರತಿನಿಧಿಯಾಗಿದ್ದಳು. ಆದರೂ ಅವಳು ಕಾವ್ಯರಚನೆಯನ್ನು ಯಾರಿಂದಲೂ ಕಲಿತವಳಲ್ಲ.

ತನಗೆ ಸರಿಕಂಡದ್ದನ್ನೆಲ್ಲ ಓದಿ, ಸ್ವಂತ ಸ್ಫೂರ್ತಿ ಅನುಭವಗಳ ಮೇಲೆ ಕವಿತೆ ಬರೆಯುತ್ತಿದ್ದಳು. ಆ ಸುಮಾರಿಗೆ ಒಂದು ದಿನ 'ಸೈಪ್ರೆಸ್ ಕರಂಡ' ಎಂಬೊಂದು ಕವಿತಾ ಸಂಗ್ರಹದ ಕರಡುಪ್ರತಿ ಅವಳಿಗೆ ಓದಲು ಸಿಕ್ಕಿತು. ಇನ್ನೊಕೆಂಟಿ ಅನೆನ್‌ಸ್ಕಿ ಎಂಬವನದು. ಆತ ವಿದ್ವಾಂಸ, ವಿಮರ್ಶಕ, ಅನೇಕರಿಗೆ ತಿಳಿಯದಿದ್ದರೂ ಅತ್ಯುತ್ತಮ ಕವಿ ಸಹ. ಹಿಂದೊಂದು ಕವಿತಾಸಂಗ್ರಹ ಪ್ರಕಟಿಸಿ, ಹಿರಿಯ ಕವಿ ಹಾಗೂ ಸಿಂಬಲಿಸ್ಟ್ ಅಲೆಕ್ಸಾಂಡರ್ ಬ್ಲೋಕ್‌ನಿಂದ ಕಟುವಾಗಿ ಟೀಕಿಸಿಕೊಂಡಿದ್ದ. ಆ ಕಾರಣ ಮತ್ತೆ ಪ್ರಕಟಿಸುವ ಧೈರ್ಯ ಮಾಡಿರಲಿಲ್ಲ. ಈ ಪುಸ್ತಕ ಸಹ ಅವನ ಮರಣಾನಂತರ ವರ್ಷದ ಮೇಲೆ ಪ್ರಕಟವಾಗಲಿತ್ತು. ಅದರಲ್ಲಿನ ಕವಿತೆಗಳನ್ನು ಓದಿ ಆನಾ ದಂಗುಬಡಿದಳು. ಅನೆನ್‌ಸ್ಕಿ ಅಂದಿನಿಂದ ಅವಳ ಕಾವ್ಯಗುರುವಾದ. ಅನೆನ್‌ಸ್ಕಿಯ ಮಾದರಿಯಿಂದಾಗಿ ಅವಳ ಮುಂದಿನ ಕಾವ್ಯರಚನೆಗೆ ಹೆಚ್ಚಿನ ಪ್ರಖರತೆ ದೊರೆಯಿತು. ತಾನು ಅಲ್ಲಿಯವರೆಗೆ ಬರೆದಿದ್ದರಲ್ಲಿ ಅನೇಕವು ಬಾಲಿಶವೆನಿಸಿದವು. ಆ ಮುಂಚಿನ ಕವಿತೆಗಳಲ್ಲಿ ೧೯೦೯ರ ಕೆಲವನ್ನು ಬಿಟ್ಟರೆ ಉಳಿದವು ಯಾವ ಸಂಗ್ರಹದಲ್ಲಿಯೂ ಕಾಣಸಿಗುವುದಿಲ್ಲ.

ಆನಾಳ ಜೀವನದ ಪ್ರಾಯಶಃ ಏಕೈಕ ಸುಖವರ್ಷವೆಂದರೆ ೧೯೧೨. ಆ ವರ್ಷ ಅವಳ ಮೊದಲ ಸಂಕಲನ 'ಸಂಜೆ' ಪ್ರಕಟವಾಯಿತು. ಅವಳ ಮಗ, ಏಕೈಕ ಸಂತಾನ, ಲೆವ್ ಹುಟ್ಟಿದ. ಹಿಂದಿನ ವರ್ಷ ಎರಡನೆ ಬಾರಿಗೆ ಪ್ಯಾರಿಸ್‌ಗೆ ಹೋಗಿಬಂದಿದ್ದಳು, ಈಗ ಇಟಲಿಯ ಪ್ರವಾಸ ಮಾಡಿಬಂದಳು. ಅವಳ ದಿಗಂತ ದೊಡ್ಡದಾಯಿತು. ಮತ್ತೆ ಎರಡು ವರ್ಷ ಬಿಟ್ಟು ಎರಡನೆ ಸಂಗ್ರಹ 'ಜಪಮಾಲೆ' ಹೊರಬಂದಿತು. ಈ ಎರಡು ಸಂಗ್ರಹ ಗಳಲ್ಲಿರುವುದೂ ಪ್ರೇಮಗೀತೆಗಳೇ. ಮೊದಲನೆ ಸಂಗ್ರಹದಿಂದ ಅವಳೊಬ್ಬ ಉತ್ತಮ ಕವಿಯೆಂಬ ಗುರುತಿಗೆ ಖಚಿತತೆ ದೊರೆತರೆ, ಎರಡನೆ ಸಂಗ್ರಹ ಅತ್ಯಂತ ಜನಪ್ರಿಯವಾಗಿ ಮುಂದಿನ ಒಂಬತ್ತು ವರ್ಷಗಳಲ್ಲಿ ವರ್ಷಕ್ಕೊಂದು ಸಂಸ್ಕರಣದಂತೆ ಪುನರ್ಮುದ್ರಿತವಾಯಿತು. ಆ ಕಾಲದಲ್ಲಿ ಕವಿತೆ ಬರೆಯುತ್ತಿದ್ದ ಯುವಕಯುವತಿಯರೆಲ್ಲರೂ ಅವಳನ್ನು ಅನುಕರಣೆ ಮಾಡುವವರೇ.

ಪೀಟರ್ಸ್‌ಬರ್ಗ್‌ನಲ್ಲಿ 'ದಿ ಸ್ಟ್ರೇ ಡಾಗ್' ('ಬ್ರದ್ಯಾಚಾಯಾ ಸಬಾಕಾ', ಬೀದಿನಾಯಿ) ಎಂಬೊಂದು ನಾಟ್ಯಗೃಹವಿತ್ತು. ಅದನ್ನು ನಡಸುತ್ತಿದ್ದವರು ಸುದೇಯ್ಕಿನಾ ದಂಪತಿಗಳು. ಹೆಂಡತಿ ಗ್ಲೆಬೋವಾ ಚೆಲುವೆ, ನಟಿ, ಆನಾಳ ಗೆಳತಿ, ಪ್ರೇಮದಲ್ಲಿ ಅವಳ ಪ್ರತಿದ್ವಂದಿ ಸಹ. ಗಂಡ ಕಲಾವಿದ, ನಾಟ್ಯಗೃಹದ ಗೋಡೆಗಳ ಮೇಲೆಲ್ಲ ತಾನೇ ಭಿತ್ತಿಚಿತ್ರಗಳನ್ನು ಬಿಡಿಸಿದ್ದ. ಅಲ್ಲಿ ದಿನವೂ ಸಂಜೆ ಕವಿಕಲಾವಿದರು ಮುಂತಾಗಿ ನಗರದ ಬುದ್ಧಿಜೀವಿಗಳು ಸೇರುತ್ತಿದ್ದರು. ಅವರ ಕೂಟಗಳು ಬೆಳಗಿನ ಜಾವದವರೆಗೂ ಸಾಗುತ್ತಿದ್ದವು. ಅಲ್ಲಿ ಬಂದು ತನ್ನ ಕವಿತೆ ಓದದ ಕವಿಯೇ ಆ ಕಾಲದಲ್ಲಿರಲಿಲ್ಲ. ಅಲ್ಲಿ ಸೇರುತ್ತಿದ್ದವರಲ್ಲಿ ಹೆಚ್ಚು ಮಂದಿ ಯುವಕಯುವತಿಯರು, ಪ್ರೇಮಿಗಳು. ಯಾವತ್ತು ಯಾರು ಯಾರನ್ನು ಪ್ರೀತಿಸಿ, ಅವರ ಹಿಂದೆ ಬಿದ್ದಿದ್ದಾರೆಂದು ಹೇಳಲಾರದಷ್ಟು ಗೋಜಿನ ಜೀವನ ಅವರದ್ದು. ಹಾಗೆಯೇ ಆನಾಳನ್ನು ಪ್ರೀತಿಸಿದವರು, ಅವಳ ಪ್ರೀತಿ ಸಂಪಾದಿಸಿದವರು ಸಹ ಅನೇಕರು. ಅವಳಿಗೆ ಅಂತಹ ಸ್ವೇಚ್ಛೆಯ ಜೀವನದ ಬಗ್ಗೆ ವ್ಯಾಮೋಹವೂ ಇತ್ತು, ದ್ವೇಷವೂ ಇತ್ತು. ಆ ಜೀವನ, ಸಂಸ್ಕೃತಿಗಳ ಅಪೇಕ್ಷಣೀಯತೆ

ಏನೇ ಇರಲಿ, ನಮ್ಮ ಮಟ್ಟಿಗೆ ಅವುಗಳನ್ನು ಕುರಿತ ಕೆಲವಾರು ಒಳ್ಳೆಯ ಕವಿತೆಗಳು ದೊರತಿವೆ (ಕ. ೧೪, ೩೯). ಅಲ್ಲಿನ ಜೀವನಕ್ಕೆ ಒಂದು ನಿದರ್ಶನವೆಂದರೆ – ೧೯೧೩ ರ ಹೊಸವರ್ಷದ ರಾತ್ರಿ ವ್ಸೆವೊಲೋದ್ ಕ್ನ್ಯಾಜೆವ್ ಎಂಬೊಬ್ಬ ಯುವಕವಿ ಹಾಗೂ ಮಿಲಿಟರಿ ಅಧಿಕಾರಿ ನಾಟ್ಯಗೃಹದ ಒಳಗೆ ಹಾಡು, ಕುಣಿತ, ಕುಡಿತ, ಅಪ್ಪುಗೆಗಳ ನಡುವೆ ಹೊಸವರ್ಷ ಆಗಮಿಸಿದ್ದಾಗ ಹೊರಗೆ ಮೆಟ್ಟಿಲಮೇಲೆ ಎದೆಗೆ ಗುಂಡಿಟ್ಟು ಆತ್ಮಹತ್ಯೆ ಮಾಡಿಕೊಂಡ. ಕಾರಣ, ಆಗಾಗಲೇ ಮದುವೆಯಾಗಿ ಗಂಡನೊಡನಿದ್ದ ಗ್ಲಬೋವಳನ್ನು ತಾನು ಪ್ರೀತಿಸಿದ್ದು, ಕವಿ ಬ್ಲೋಕ್‌ನೂ ಅವಳನ್ನು ಪ್ರೀತಿಸಿ ಅವಳು ಅವನಿಗೆ ಒಲಿದಿದ್ದಾಳೆಂದು ತಿಳಿದದ್ದು! ಈ ಘಟನೆಗೆ ಎಲ್ಲೋ ಅಂಚಿನಲ್ಲಿ ಆನಾಳೂ ಕಾರಣ ಳಾಗಿದ್ದಳೇನೊ. ಪ್ರಾಯಶಃ ಅವಳೂ ಅವನನ್ನು ತಿರಸ್ಕರಿಸಿ ಹತಾಶೆಗೆ ತಳ್ಳಿರಬೇಕು. ಆ ಯುವಕವಿಯ ಸಾವಿಗೆ ಆನಾ ಒಳಗೊಳಗೆ ತಲ್ಲಣಿಸಿದಳು. ಆ ನೆನಪೊಂದು ಭೂತವಾಗಿ ಅವಳನ್ನು ಇಡೀ ಜೀವಮಾನ ಕಾಡಿತು. 'ಜಪಮಾಲೆ'ಯ ಕೆಲವೊಂದು ಕವಿತೆಗಳು ಆ ನೆನಪಿನ ಮರುಕಳಿಕೆಯ ಅಭಿವ್ಯಕ್ತಿ. ಹಾಗೆಯೇ ಅವಳ ಅಂತಿಮ ಹಾಗೂ ಮಹತ್ವದ ಕೃತಿ 'ನಾಯಕನಿಲ್ಲದ ಕವಿತೆ'ಯ ಕೇಂದ್ರಬಿಂದುವೂ ಆಯಿತು.

ರಷ್ಯದ ಕಾವ್ಯದ 'ರಜತಯುಗ'ದ ಎರಡನೆ ಘಟ್ಟದಲ್ಲಿ ಆಕ್ಮೆಯಿಸಂ ಪ್ರವರ್ಧಮಾನಕ್ಕೆ ಬರುತ್ತ ಹೋದಂತೆ ಸಿಂಬಲಿಸಂ ಹೇಳಹೆಸರಿಲ್ಲವಾಯಿತು. ಆಗ ಆಕ್ಮೆಯಿಸಂನ ಜತೆಜತೆಗೇ ತಲೆಯೆತ್ತಿದ್ದ ಇನ್ನೊಂದು ಕಾವ್ಯ–ಚಳವಳಿ 'ಫ್ಯೂಚರಿಸಂ' (ಭವಿಷ್ಯಕಾವ್ಯ). ಮಾಯಕೊವಸ್ಕಿ ಅದರ ಮುಂದಾಳು. ಇನ್ನೊಬ್ಬ ಪ್ರಮುಖ ಖ್ಲೆಬ್ನಿಕೋವ್. ಮೊದಲ ಕೆಲವರ್ಷ ಪಾಸ್ತರ್‌ನಾಕ್ ಸಹ ಅವರ ಜತೆಗಿದ್ದ. ಆಕ್ಮೆಯಿಸಂ ಪೀಟರ್ಸ್‌ಬರ್ಗ್‌ನ ದೇಣಿಗೆಯಾದರೆ ಫ್ಯೂಚರಿಸಂ ಮಾಸ್ಕೋದು. ಅವರು ಆಕ್ಮೆಯಿಸಂನ ಒಳಮಾರ್ಗವನ್ನು ಒಪ್ಪದವರು. ಕವಿತೆ ಅವರಿಗೆ ಒಂದು ಸುಂದರ ಕಲಾಕೃತಿಯಲ್ಲ. ಅದು ಜನತೆಯ ಧ್ವನಿಯಾಗಬೇಕು, ದೇಶದ ಸಾಮಾಜಿಕ–ರಾಜಕೀಯ ಕ್ರಾಂತಿಗ ತುತ್ತೂರಿಯೂದಬೇಕು, ತಾಂತ್ರಿಕ ಬೆಳವಣಿಗೆಯನ್ನು ಪ್ರತಿಪಾದಿಸಬೇಕು. ಅದನ್ನು ಸಾಧಿಸಲು ಕಾವ್ಯದ ಭಾಷೆ, ತಂತ್ರ ಬದಲಾಗಿ, ಹೊಸಹೊಸ ಶಬ್ದಗಳು ಪ್ರಯೋಗವಾಗಬೇಕು. ಅದರಲ್ಲಿ ಕಲ್ಪಿತಶಬ್ದ, ಬೀದಿಭಾಷೆ ಸಹ ಸೇರಬೇಕು, ಇತ್ಯಾದಿ. ಮಾಯಕೊವಸ್ಕಿಯ ವ್ಯಕ್ತಿತ್ವ ಇಂತಹ ಕಾವ್ಯಕ್ಕೇ ಹೇಳಿಮಾಡಿದ್ದು. ಮ್ಯಾಂದಲ್‌ಷ್ಟಾಮ್‌ನ ಹೆಂಡತಿ ನಜ್ದೆಷ್ದಾ ಅಂದಂತೆ, ಹೃದಯವಿರಬೇಕಾದಲ್ಲಿ ಅವನೊಂದು ತಮಟೆ ಕಟ್ಟಿಕೊಂಡು ಓಡಾಡುತ್ತಿದ್ದವನು!

೧೯೧೫ರಲ್ಲೊಮ್ಮೆ 'ಸ್ಟ್ರೇ ಡಾಗ್'ನಲ್ಲಿ ಮಾಯಕೊವಸ್ಕಿ ತನ್ನ ಕವಿತೆ ಓದಿದ. ಅವುಗಳಲ್ಲಿ ಕೊನೆಯದು 'ಸ್ಟ್ರೇ ಡಾಗ್'ನ ಸಂಸ್ಕೃತಿಯನ್ನು ಹೀಯಾಳಿಸಲೆಂದೇ ಬರೆದದ್ದಿರಬೇಕು. ಅದರ ಕೊನೆಯ ಸಾಲುಗಳು ಹೀಗಿದ್ದವು : "ನಿಮ್ಮಂತಹವರಿಗಾಗಿ ನಾನು ಬದುಕನ್ನು ವ್ಯರ್ಥಮಾಡಿಕೊಳ್ಳಬೇಕೆ?/ ಹೆಣ್ಣು ಆಹಾರಗಳ ಹೊರತು ಬೇರೇನನ್ನೂ ಪ್ರೀತಿಸದವರಿಗೆ?/ ಬದಲು, ಹೋಗಿ ಯಾವದಾದರೂ ಮಾಸ್ಕೊ ಬಾರಿನಲ್ಲಿ/ ಸೂಳೆಯರಿಗೆ ಪೈನಾಪಲ್–ಸೋಡ ಮಾರುವುದು ವಾಸಿ" ('ವಾಮ್', ನೀವು). ಆ ಕವಿತೆಯನ್ನು ಕೇಳಿದ ಸಭಿಕರಲ್ಲಿ ಹಲವರು ಮುದಿಮಹಿಳೆಯರು ಮೂರ್ಛೆಹೋದರು. ಗುಲ್ಲು, ಗದ್ದಲ. ಅದೇ

ವರ್ಷ ಪೊಲೀಸರು ನಾಟ್ಯಗೃಹವನ್ನು ಮುಚ್ಚಿದರು. ಮತ್ತೆ ಕೆಲ ಕಾಲದ ನಂತರ ತೆರೆದು ೧೯೨೪ರಲ್ಲಿ ಅದು ಅಂತಿಮವಾಗಿ ಮುಚ್ಚಿಕೊಂಡಿತು.

ಈ ಸಮಯದಲ್ಲಿ ಆನಾಳನ್ನು ಅತಿಯಾಗಿ ವ್ಯಥೆಗೆ ಗುರಿಮಾಡಿದ ಒಂದು ಸಂಗತಿಯೆಂದರೆ ಮೊದಲನೆ ಮಹಾಯುದ್ಧ. ಹಿಟ್ಲರ್ ರಷ್ಯದ ಮೇಲೆ ದಾಳಿಮಾಡಿದ್ದ. ಆನಾಳ ಕಾವ್ಯದ ದಾರಿತಿರುವು ಅದು. ಇತರೆಲ್ಲ ಕವಿಗಳೂ ತಮ್ಮತಮ್ಮೊಳಗೆ ಸ್ಫೂರ್ತಿ ಅರಸುತ್ತಿದ್ದಾಗ ಅವಳ ಕಣ್ಣು ಹೊರಜಗತ್ತಿಗೆ ತೆರೆಯತೊಡಗಿತು. ಯುದ್ಧ ಷುರುವಾದ ಮಾರನೆಯ ದಿನವೇ ರಷ್ಯಕ್ಕೆ ಕಾದಿದ್ದ ದುರ್ಗತಿಯನ್ನು ಮುಂದಾಗಿ ಊಹಿಸಿ ಒಂದು ಕವಿತೆ ಬರೆದಳು (ಕ. ೨೦). ಹಿಂದೆಯೇ ಇನ್ನೂ ಹಲವು ಬಂದವು (ಕ. ೨೪, ೨೫) 'ಈ ನೆಲ ಹೊಸ ಹೊಸ ಗೋರಿಗಳಿಂದ ಕಿಕ್ಕಿರಿಯಲಿದೆ' ಎಂದು ಅವಳು ನುಡಿದ ಪ್ರವಾದ ರಷ್ಯದ ಪಾಲಿಗೆ ಮುಂದಿನ ಎಪ್ಪತ್ತು ವರ್ಷಗಳಿಗೂ ಹೆಚ್ಚುಕಾಲ ನಿಜವಾಯಿತು. ಅವಳನ್ನು ಹತ್ತಿರದಿಂದ ಅರಿತಿದ್ದ ಕವಿ ಮ್ಯಾಂದಲ್‌ಷ್ಟಾಮ್ ತನ್ನೊಂದು ಕವಿತೆಯಲ್ಲಿ 'ಈ ಹೆಂಗಸಿಗೆ ಮುಂದಾಗುವುದು ಹೇಗೆ ತಿಳಿಯುತ್ತದೆ?' ಎಂದು ಉದ್ಗರಿಸಿ, ಅವಳನ್ನು ಗ್ರೀಸಿನ ಭವಿಷ್ಯವಾದಿ ಕ್ಯಾಸಂದ್ರಾಗೆ ಹೋಲಿಸಿದ್ದ. ಕಾವ್ಯದಲ್ಲಿನ ಅವಳ ಈ ಶಕ್ತಿಗೆ ಮುಂದೆಯೂ ಅನೇಕ ಕವಿತೆಗಳು ಸಾಕ್ಷಿಯಾಗುತ್ತವೆ.

ಆನಾಳ ಕವಿತೆಯನ್ನು ಮೆಚ್ಚಿದ್ದವರಲ್ಲಿ ಬ್ಲೋಕ್ ಸಹ ಒಬ್ಬ. ಅವನು ಆನಾಳ ಜತೆಕವಿಗಳಿಗಿಂತ ಹತ್ತುವರ್ಷ ದೊಡ್ಡವನು. ಅವನದು ಅಧಿಕಾರದ ವಾಣಿ. ಅವನು ಆನಾಳಿಗೊಂದು ಕಿವಿಮಾತು ಹೇಳಿ ಕಾಗದ ಬರೆದಿದ್ದ – "ಸತ್ತ ಮದುವಣಿಗ, ಬೊಂಬೆಗಳು, ದೇಶಾಂತರದ ವೈಚಿತ್ರ್ಯಗಳು, ಗೊತ್ತಿಲ್ಲದ ಹತ್ತುಮಂದಿಯೊಂದಿಗೆ ಹತ್ತು ಬಗೆಯ ಸಮೀಕರಣ – ಕವಿತೆಗೆ ಇವುಗಳೆಲ್ಲದರ ಆಗತ್ಯವಿಲ್ಲ. ಅದಿನ್ನೂ ಗಡುಸಾಗಬೇಕು, ಹೆಚ್ಚು ನಯರಹಿತವಾಗಬೇಕು, ಹೆಚ್ಚು ಬಾಧಿಸುವಂತಾಗಬೇಕು.'' ಆ ಹೊತ್ತಿಗಾಗಲೇ ಹಲವಾರು ಕಾವುನೋವುಗಳ ಒತ್ತರದಲ್ಲಿ ಬದಲಾಗತೊಡಗಿದ್ದ ಆನಾಳ ಕಾವ್ಯದೃಷ್ಟಿ ಬ್ಲೋಕ್‌ನ ಸಲಹೆಯಂತೆ ಚುರುಕಾಯಿತು.

ಕಾಡಿ ಬೇಡಿ, ಗುಮಿಲ್ಯೊವ್ ಆನಾಳನ್ನು ಮದುವೆಯಾಗಿದ್ದ, ನಿಜ. ಒಂದು ಮಗುವೂ ಆಗಿತ್ತು. ಆದರೆ ಅವನು ಅವಳಲ್ಲಿ ಕಂಡು ಮೆಚ್ಚಿದ್ದದ್ದು ಕೇವಲ ಒಬ್ಬ ಪ್ರತಿಭಾನ್ವಿತ ಕವಿಯನ್ನು. ಅವಳೂ ಅವನಂತೆಯೇ. ಇಬ್ಬರೂ ಹುಚ್ಚುಕುದುರೆಗಳು. ಒಬ್ಬರ ಸ್ವಾತಂತ್ರ್ಯ ಇನ್ನೊಬ್ಬರಿಗೆ ಸಹಿಸದು. ಬಾಳಸಂಗಾತಿಗಳಾಗಿ ಸುಖದುಃಖಗಳನ್ನು ಹಂಚಿಕೊಂಡು ಭವಿಷ್ಯವನ್ನು ರೂಪಿಸಿಕೊಳ್ಳುವ ಕಲೆ ಅವರ ಜಾಯಮಾನದಲ್ಲಿರಲಿಲ್ಲ. ಅವಳಿಗಾಗಿ ಒಂದಲ್ಲ ಹಲವು ಸಲ ಆತ್ಮಹತ್ಯೆ ಮಾಡಿಕೊಳ್ಳಲು ಹೋಗಿ ಸಾವಿನಂಚಿನಿಂದ ಬದುಕಿ ಬಂದಿದ್ದವನೇ ಈಗ ಮದುವೆಯಾದ ಕೆಲವೇ ತಿಂಗಳಲ್ಲಿ ಅವಳೊಬ್ಬಳನ್ನೇ ಹಿಂದೆಬಿಟ್ಟು ಮತ್ತ ಮತ್ತೆ ವಿದೇಶಪರ್ಯಟನೆಗೆ ಹೊರಟುಬಿಡುತಿದ್ದ. ಯುದ್ಧ ಷುರುವಾದಾಗ ತಾನೇ ಮುಂದಾಗಿ ಸೇನೆಗೆ ಭರ್ತಿಯಾಗಿ ಕಾದಾಡಲು ಹೋದ. ಅವನಿಲ್ಲದ ದೀರ್ಘ ಅವಧಿಗಳಲ್ಲಿ ಆನಾ ತ್ವೆರ್ ಪ್ರಾಂತದ ಸ್ಲೆಪ್ನೆವೋದಲ್ಲಿ ಅವನ ತಾಯಿಯ ಮನೆಯಲ್ಲಿರುತ್ತಿದ್ದಳು. ಅತ್ತೆಸೊಸೆಗೆ ಆಗದು. ಆನಾಳಿಗೆ ತನ್ನ ಕವಿತೆ, ಮಗು ಸಂಗಾತಿಯಾದರು. ಬರುಬರುತ್ತ ಅವಳ ವ್ಯಕ್ತಿನಿಷ್ಠ ಜೀವನಕ್ಕೆ ಮಗುವೂ ಭಾರವಾಯಿತು.

ಕೊನೆಗೆ ಅದನ್ನು ಅಜ್ಜಿಯೊಂದಿಗೆ ಬಿಟ್ಟು ಒಬ್ಬಳೇ ಇರತೊಡಗಿದಳು. ಏಕಾಂತ, ವ್ಯಥೆ. ಆ ಸ್ಥಿತಿಯಲ್ಲಿ ಅವಳ ಗಮನ ಹೊಸಹೊಸ ನಲ್ಲರತ್ತ ಹರಿಯತೊಡಗಿತು. ಅಂತಹ ನಲ್ಲರು ಸಹ ಅವಳಿಗೆ ಅದೆಷ್ಟೋ. ಗುಮಿಲ್ಯೊವ್‌ನೊಂದಿಗೆ ತೀರಾ ಹಳಸಿಕೊಂಡಾಗ ಮೊದಲೊಂದು ವರ್ಷ ಬೇರೆ ಬೇರೆ ಇರತೊಡಗಿದರು. ಆಗ ಅವಳು ಬರೆದ ಒಂದು ಕವಿತೆಯಲ್ಲಿ 'ಇನ್ನು ಎಂದೆಂದಿಗೂ ಇಲ್ಲಿ ಗಂಡಸಿನ ಧ್ವನಿ ಕೇಳಿಬರುವುದಿಲ್ಲ, ಶಿಲಾಯುಗದ ಗಾಳಿಯಷ್ಟೇ ಈ ಕಪ್ಪನೆಯ ಬಾಗಿಲುಗಳನ್ನು ಬಡಿಯುತ್ತಿರುತ್ತದೆ' ಎಂದು ತನ್ನ ಬಗ್ಗೆ ತಾನೇ ಪ್ರವಾದ ನುಡಿದುಕೊಂಡಳು (ಕ. ೩೨). ೧೯೧೮ರಲ್ಲಿ ಗುಮಿಲ್ಯೊವ್‌ನೊಂದಿಗೆ ವಿವಾಹವಿಚ್ಛೇದನೆಯಾಯಿತು. ಗುಮಿಲ್ಯೊವ್ ನಂತರ ಅವಳಿಗೆ ಸಾಯುವವರೆಗೂ ಅರ್ಧಶತಮಾನಕಾಲ ತನ್ನದೆಂದುಕೊಳ್ಳುವ ಸರಿಯಾದ ಒಂದು ಮನೆಯಿರಲಿಲ್ಲ, ಗೊತ್ತಾದ ಸಂಪಾದನೆಯಿರಲಿಲ್ಲ. ಬೆಂಕಿ ಹೊತ್ತಿದಾಗ ಬಾವಿಗೆ ಹಾರಿಕೊಂಡಂತೆ ಒಬ್ಬರಾದ ಮೇಲೆ ಒಬ್ಬರನ್ನು ಕಟ್ಟಿಕೊಂಡರೂ ಅವರು ಕೊನೆಯುವರೆಗೂ ಉಳಿದು ನೆರಳುಕೊಡುವ ಗಂಡಂದಿರಾಗಲಿಲ್ಲ, 'ಶಿಲಾಯುಗದ ಗಾಳಿ'ಗಳಾದರು. ಅವರಲ್ಲಿ ಮೊದಲನೆಯವನು ಶಿಲೆಯ್‌ಕೊ, ಹೆಸರಾಂತ ಸಂಶೋಧಕ. ಅಧಿಕೃತವಾಗಿ ಮದುವೆಯೂ ಆಯಿತು. ಆದರೆ ಅವನು ಆನಾಳನ್ನು ದಬ್ಬಾಳಿಕೆಯಿಂದ ನಡೆಸಿಕೊಂಡ. ಅವಳು ಬರೆದ ಕವಿತೆಗಳನ್ನೆಲ್ಲ ಸುಟ್ಟುಹಾಕುತ್ತಿದ್ದ. ಆನಾ ತನ್ನ ಕವಿತೆಗಳಲ್ಲಿ ಅವನನ್ನೊಂದು ದೈತ್ಯಸರ್ಪ(ಡ್ರ್ಯಾಗನ್)ಕ್ಕೆ ಹೋಲಿಸಿದಳು. 'ಗಂಡ ಗಲ್ಲುಗಾರ, ಅವನ ಮನೆ ಸೆರೆಮನೆ' ಎಂದು ಗೋಳಾಡಿದಳು. ಅವನಿಂದ ಬಿಡಿಸಿಕೊಳ್ಳುವುದೇ ಕಷ್ಟವಾಯಿತು.

ಈ ಮಧ್ಯೆ ಅವಳ ಮೂರನೆ ಸಂಕಲನ 'ಬೆಳ್ಳಕ್ಕಿ ಹಿಂಡು' ೧೯೧೭ರಲ್ಲಿ ಪ್ರಕಟವಾಯಿತು. ಯುದ್ಧವಿಷಯಕ ಇಲ್ಲವೇ ಲೆನಿನ್‌ಗ್ರಾಡ್ ಮೇಲಿನ ತನ್ನ ಒಲವನ್ನು ಎತ್ತಿಹಿಡಿಯುವ ಕೆಲವೊಂದು ಕವಿತೆಗಳನ್ನು ಬಿಟ್ಟರೆ ಇದರಲ್ಲಿಯೂ ಹೆಚ್ಚಾಗಿ ಪ್ರೇಮಗೀತೆಗಳೇ. ಅನೇಕವು ಗುಮಿಲ್ಯೊವ್‌ನಿಂದ ಬೇರೆಯಾದ ಮೇಲೆ ಅವಳಿಂದ ಏನನ್ನೂ ನಿರೀಕ್ಷಿಸದೆ ಪ್ರೀತಿಯ ಸಾಂತ್ವನವೆರೆದಿದ್ದ ಬೋರಿಸ್ ಆನ್‌ರೆಪ್‌ನನ್ನು ಕುರಿತದ್ದು. ಆಗಿನ ಯುದ್ಧೋತ್ತರ ಕ್ರಾಂತಿಯ ದಿನಗಳಲ್ಲಿ ಸಾಮಾಜಿಕ ಸ್ಥಿತಿಗತಿಗಳು ಬುಡಮೇಲಾಗಿದ್ದರೂ ಸಂಗ್ರಹ ಸಾಕಷ್ಟು ಯಶಸ್ಸುಗಳಿಸಿತು.

ಆ ವರ್ಷ ಜಗತ್ತನ್ನೇ ನಡುಗಿಸಿದ ರಷ್ಯದ ಮಹಾಕ್ರಾಂತಿಯ ವರ್ಷ. ಅದರ ಮೊದಲ ಕಿಡಿ ಸಿಡಿದದ್ದು ಆನಾಳ ಮನೆಬಾಗಿಲಲ್ಲಿಯೇ, ಪೆತ್ರೊಗ್ರಾಡ್‌ನಲ್ಲಿ (ಹಿಂದಿನ ಪೀಟರ್ಸ್‌ಬರ್ಗ್). ಅನೇಕ ಪ್ರಥಮಗಳಿಗೆ ಹೆಸರಾಗಿದ್ದ ಆ ನಗರ ಈಗ ಕ್ರಾಂತಿಗೂ ಪ್ರಥಮವಾಯಿತು. ಕ್ರಾಂತಿ ಇಡೀ ದೇಶಕ್ಕೆ ಹರಡಿದಂತೆ ದೇಶ ಎರಡಾಗಿ ಒಡೆಯಿತು. ಕ್ರಾಂತಿಯ ಪರವಾಗಿದ್ದವರು 'ಕೆಂಪು ರಷ್ಯನರು', ಕ್ರಾಂತಿಯ ವಿರೋಧಿಗಳು 'ಬಿಳಿಯ ರಷ್ಯನರು'. ಕ್ರಾಂತಿ ಕೆಲವೇ ತಿಂಗಳಲ್ಲಿ ಕೊನೆಗಂಡರೂ ಅದರ ಪರಿಣಾಮವಾಗಿ ದೇಶದ ಒಳಗೆ ಹಾಗೂ ಹೊರಅಂಚಿನಲ್ಲಿ ಕೆಂಪು–ಬಿಳಿ ರಷ್ಯನರ ನಡುವೆ ಯಾದವೀ ಕಲಹ ಷುರುವಾಗಿ ಎಳೆಯುತ್ತಲೇ ಹೋಯಿತು. ಮೊದಲ ಯುದ್ಧದಲ್ಲಾಗಲೇ ಸಾಕಷ್ಟು ಹಿಂಸೆ, ರಕ್ತಪಾತಗಳನ್ನು ಕಂಡಿದ್ದ ರಷ್ಯ ಅದರಿಂದ ಚೇತರಿಸಿಕೊಳ್ಳುವ ಮೊದಲೇ ಅದಕ್ಕೂ ಹೆಚ್ಚಿನ ವಿಪತ್ತನ್ನು ಕಾಣುವಂತಾಯಿತು. ದೇಶದ ಜತೆಗೇ 'ನಿಷ್ಠುರಯುಗ ಅವಳೊಂದು ನದಿಯೋ

ಎಂಬಂತೆ ಅವಳ ದಿಕ್ಕು ಬದಲಾಯಿಸಿತು' (ಕ. ೬೬). ಆನಾಳ ವೇದನೆ ಇಮ್ಮಡಿಸಿತು. ಅವಳ ಕವಿಹೃದಯ ಈಗ ಇತರೆಲ್ಲ ಸಂಗತಿಗಳನ್ನೂ ಬದಿಗೊತ್ತಿ ದೇಶದ ಕಡೆ ತಿರುಗಿತ್ತು. ಬುದ್ಧಿಜೀವಿಗಳಲ್ಲಿ ಒಡಕು ಹುಟ್ಟಿ ಕೆಲವರು ಕ್ರಾಂತಿಪರವಾದರೆ ಮತ್ತೆ ಕೆಲವರು 'ಮುಂದೆ ಹೇಗೋ' ಎಂದು ದೇಶ ತೊರೆದು ಹೋಗಿ ವಿದೇಶಗಳಲ್ಲಿ ನೆಲಸಿದರು. ಅವರಲ್ಲಿ ಆನಾಳ ಆಪ್ತರು, ಮಿತ್ರರು ಅನೇಕರು. ಆನಾಳಿಗೆ ಅದು ನಿರ್ಣಾಯಕ ಗಳಿಗೆ. ಅವಳಿಗೂ ದೇಶಬಿಟ್ಟು ಹೋಗುವುದು ಕಷ್ಟವಾಗಿರಲಿಲ್ಲ. ಅವಳು ಫ್ರಾನ್ಸ್ ಇಟಲಿಗಳ ವಿಕಸಿತ ಜೀವನದ ರುಚಿ ಕಂಡಿದ್ದವಳು. ಅಲ್ಲಿ ಅವಳಿಗೆ ಸಂತೋಷದಿಂದ ನೆಲೆಕೊಡುವವರೂ ಇದ್ದರು. ದೇಶದಲ್ಲಿ ಪಾಪ, ಅಧರ್ಮ ತುಂಬಿದ್ದು ಅದಕ್ಕೆ ಮಂಕುಬಡಿದಿದ್ದರೂ ಹಾಗೆ ಹೋಗುವುದು ಮಹಾಪಾತಕವೆಂಬ ನಿರ್ಣಯಕ್ಕೆ ಬಂದಳು. ತನ್ನ ನಿಲುವನ್ನು ಸ್ಪಷ್ಟಪಡಿಸಿ ಕವಿತೆ ಬರೆದಳು (ಕ. ೩೬, ೪೫ ಇತ್ಯಾದಿ). ಹೋದವರನ್ನು ಕಟುವಾಗಿ ಟೀಕಿಸಿದಳು. (ಕ. ೩೫). ಮುಂದೆ, ಹಾಗೆ ಹೋಗಿ ಹಿಂದಿರುಗಿ ಬಂದ ಕೆಲವು ಸ್ನೇಹಿತರ ಮುಖ ನೋಡುವುದು ಸಹ ಅವಳಿಗೆ ಬೇಕಾಗಲಿಲ್ಲ. ಅವಳು ಈ ಸಂದರ್ಭದಲ್ಲಿ ಬರೆದ 'ನನಗೊಂದು ಧ್ವನಿ ಕೇಳಿಸಿತು...' (ಕ. ೩೬) ಇಂದಿಗೂ ರಷ್ಯದ ವಿಖ್ಯಾತ ಕವಿತೆಗಳಲ್ಲೊಂದು. ಅದು ಅವಳ ದೇಶಪ್ರೇಮಕ್ಕೆ ಶಾಶ್ವತವಾಗಿ ನಿಲ್ಲುವ ಪ್ರಮಾಣ. ಸ್ವತಃ ಕವಿ ಬ್ಲೋಕ್‌ನೇ ಅದನ್ನು ಬಾಯಿಪಾಠಮಾಡಿ, 'ನಿಲುವೆಂದರೆ ಇದು' ಎಂದು ಉದ್ಧರಿಸುತ್ತಿದ್ದನಂತೆ. ಮುಂದೆ ಸರಕಾರ ಅವಳಿಗೆ ಎಷ್ಟೇ ಕಿರುಕುಳ ಕೊಟ್ಟರೂ ಈ ಒಂದು ಕವಿತೆಯಿಂದಾಗಿ ಅವಳನ್ನು ಬದುಕಿ ಉಳಿಸಿತು. ಅವಳ ಕವಿತೆಗಳು ಪ್ರಕಟವಾಗದಂತೆ ತಡೆಹಾಕಿದರೂ ಇದನ್ನೂ, ಇಂತಹ ಇನ್ನು ಕೆಲವನ್ನೂ ತನಗೆ ಅಪಥ್ಯವಾದ ಸಾಲುಗಳನ್ನು ಬಿಟ್ಟು ತನ್ನ ಸಂಕಲನಗಳಲ್ಲಿ ಬಳಸಿಕೊಳ್ಳುತ್ತಿತ್ತು. ಆನಾಳಲ್ಲಿ ಅವಳಿಗೇ ತಿಳಿಯದೆ ಸುಪ್ತವಾಗಿದ್ದ ದೇಶಭಕ್ತಿ ಜಾಗ್ರತವಾದದ್ದು ಇಂತಹ ಕವಿತೆಗಳಿಂದ. ಯುದ್ಧ, ಕ್ರಾಂತಿಗಳಂತಹ ಮಹಾಉತ್ಪಾತಗಳನ್ನು ಕಾಣದೆ ಹೋಗಿದ್ದರೆ ಆನಾ ಬರಿಯ 'ಪ್ರೇಮಗೀತೆಗಳ ಕವಿ'ಯಾಗಿ, ಇತಿಹಾಸದ ತಳದಲ್ಲಿ ದಬ್ಬಿಹೋಗುತ್ತಿದ್ದಳೇನೊ.

ಆನಾ ಹುಟ್ಟುವಾಗಲೇ ದೈವ ಅವಳ ಎದೆಯ ಮೇಲೆ ದುಃಖದ ಮುದ್ರೆಯೊತ್ತಿ ಕಳಿಸಿತ್ತು. ಅದರ ವಿಷಪ್ರಭಾವ ಆಗಿನ್ನೂ ಷುರುವಾಗಿತ್ತು, ಅಷ್ಟೇ. ಕ್ರಾಂತಿಯ ನಂತರ ಬಾಲ್ಷೆವಿಕ್ ಸರಕಾರ ಬಲಗೊಳ್ಳುತ್ತಹೋದಂತೆ ಕ್ರಾಂತಿವಿರೋಧಿಗಳಿಗೆಲ್ಲ ದಮನ ಕಾದಿತ್ತು. ಅದಕ್ಕೆ ಮೊಟ್ಟಮೊದಲು ಬಲಿಯಾದವನು ಗುಮಿಲ್ಯೊವ್. ೧೯೨೧ರಲ್ಲಿ ಲೆನಿನ್‌ನ ಹೊಸ ಸರಕಾರ ಅವನನ್ನೂ ಮತ್ತಿತರ ಅರವತ್ತು ಜನರನ್ನೂ ಕ್ರಾಂತಿವಿರೋಧಿ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆಂದು ಯಾವೊಂದು ವಿಚಾರಣೆಯೂ ಇಲ್ಲದೆ ಗುಪ್ತವಾಗಿ ಗುಂಡಿಟ್ಟು ಕೊಂದಿತು. ಕೊನೆಗೆ ಅವನ ಹೆಣದ ಗತಿ ಏನಾಯಿತೆಂದು ಸಹ ಈವರೆಗೂ ಯಾರಿಗೂ ತಿಳಿಯದು. ಆ ಹತ್ಯೆ ಮುಂದೆ ಸ್ತಾಲಿನ್‌ನ ಆಳ್ವಿಕೆಯಲ್ಲಿ ನಡೆಯಲಿದ್ದ ಸಹಸ್ರಾರು ಬುದ್ಧಿಜೀವಿಗಳ ಹತ್ಯೆಗೆ ನಾಂದಿ. ಗುಮಿಲ್ಯೊವ್‌ನೊಂದಿಗೆ ವಿವಾಹವಿಚ್ಛೇದನೆಯಾಗಿ ದೈಹಿಕವಾಗಿ ದೂರವಾದಷ್ಟೂ ಅವನು ಆನಾಳ ಮನಸ್ಸಿಗೆ ಹತ್ತಿರವಾಗುತ್ತಿದ್ದ. ಇದು ಆನಾಳ ಸ್ವಭಾವದ ಒಂದು ಪ್ರವೃತ್ತಿಯೆಂಬುದಕ್ಕೆ ಮುಂದೆಯೂ ನಿದರ್ಶನಗಳು ದೊರೆಯುತ್ತವೆ. ಗುಮಿಲ್ಯೊವ್‌ನ ನೆನಪು, ಸಾವಿನ ಆಘಾತ ಆನಾಳ

ಜೀವನದ ಕೊನೆಯವರೆಗೂ ಉಳಿದುಬಂದು, ಮತ್ತೆ ಮತ್ತೆ ಅವಳ ಕವಿತೆಯಲ್ಲಿ ಕಾಣಿಸಿಕೊಳ್ಳತೊಡಗಿದವು (ಕ. ೪೪, [೫೯]). ಮತ್ತೆರಡು ಬಾರಿ ಮದುವೆ ಮಾಡಿಕೊಂಡರೂ ನಿಜವಾಗಿ ಮನಸ್ಸಿನಲ್ಲಿ ಗಂಡನಾಗಿ ಉಳಿದವನು ಅವನೊಬ್ಬನೇ.

ಅದೇ ವರ್ಷ ಅನಾಳ ಇನ್ನೆರಡು ಕವಿತಾಸಂಗ್ರಹಗಳು – 'ಗುಬ್ಬಚ್ಚಿಬಾಳೆ' ಮತ್ತು 'ಕ್ರಿಸ್ತೋತ್ತರ ೧೯೨೧' ಪ್ರಕಟವಾದವು. ಕ್ರಾಂತಿಯ ಹಾಗೂ ಕ್ರಾಂತ್ಯೋತ್ತರ ದಿನಗಳಲ್ಲಿ ಬರೆದ ಕವಿತೆಗಳು ಅವು. ಮೊದಲಯುದ್ಧದೊಂದಿಗೆ ಕೊಂಚಕೊಂಚವಾಗಿ ಬಹಿರ್ಮುಖಿಯಾಗತೊಡಗಿದ್ದ ಅವಳ ಕಣ್ಣುಗಳು ಈ ಎರಡು ಸಂಗ್ರಹಗಳಲ್ಲಿ ಹೆಚ್ಚು ತೆರೆದುಕೊಂಡವು.

ಗುಮಿಲ್ಯೊವ್‌ನೊಂದಿಗೆ ಆಕ್ಮೆಯಿಸಂ ಸಹ ಒಂದು ಚಳವಳಿಯಾಗಿ ಅಂತ್ಯ ಕಂಡಿತ್ತು. ಕ್ರಾಂತಿಯ ನಂತರದ ಉನ್ಮಾದದ ದಿನಗಳಲ್ಲಿ ಸಾಹಿತ್ಯಪ್ರೇಮಿಗಳ ಆಸಕ್ತಿ ಒಲಿದಿದ್ದದ್ದು ಫ್ಯೂಚರಿಸಂನ ಕಡೆಗೆ. ಮಾಯಕೊವಸ್ಕಿ ಈಗ ರಾಷ್ಟ್ರದ ಕಾವ್ಯಪುರುಷನಾಗಿದ್ದ. ವಿಮರ್ಶಕರು ಹಿಂದಿನ ಮತ್ತು ಈಗಿನ ಕಾವ್ಯಪದ್ಧತಿಗಳ ತುಲನೆಗೆ ತೊಡಗಿದರು. ಅನಾಳನ್ನು ಹಿಂದಿನ ಕಾವ್ಯದ ಪ್ರತಿನಿಧಿಯನ್ನಾಗಿ ಆರಿಸಿಕೊಂಡು ಹೊಸಕಾವ್ಯದ ಮಾಯಕೊವಸ್ಕಿಯೊಂದಿಗೆ ಹೋಲಿಸಿ, ಅಕಾರಣವಾಗಿ ಅವಳ ಖಂಡನೆಗೆ ತೊಡಗಿದರು. ಮಾಯಕೊವಸ್ಕಿಯ ಕಾವ್ಯದ ದಾರಿ ಬೇರೆಯಾದರೂ, ಅವನು ಬಹಿರಂಗವಾಗಿ ಆಕ್ಮೆಯಿಸಂನನ್ನು ಟೀಕಿಸುತ್ತಿದ್ದರೂ ಗುಟ್ಟಾಗಿ ಅನಾಳ ಕವಿತೆಗಳನ್ನು ಓದುತ್ತಿದ್ದು ಅವಕ್ಕೆ ಮಾರುಹೋಗಿದ್ದ. ಆದರೆ ಅವನ ಅನುಯಾಯಿಗಳು 'ಅವಳದ್ದು ಮನೆ–ಸಂಸಾರಗಳ ಕಿರಿದಾದ ಇಕ್ಕಟ್ಟಿನ ಪ್ರಪಂಚ', ಅವಳ ಸ್ತ್ರೀಪಾತ್ರಗಳು 'ಗಂಡಸಿನ ಆಟಕ್ಕಾಗಿಯೇ ಸೃಷ್ಟಿಯಾದ ದಿವಾನಖಾನೆಯ ಹೆಣ್ಣುಗೊಂಬೆಗಳು', 'ದೇವರು, ಪ್ರೇಮಗಳಾಚೆ ಅವಳಿಗೊಂದೂ ಕಾಣಿಸುವುದಿಲ್ಲ', 'ಮನೋರೋಗದ ಕವಿತೆ, ಇಂದಿನ ಶ್ರಮ, ಒಕ್ಕೂಟಗಳ ಬಗ್ಗೆ ಸ್ಫೂರ್ತಿ ಕೊಡುವಂತಹದು ಏನೂ ಇಲ್ಲ' ಎಂದೆಲ್ಲ ಬೆಂಕಿಕಾರಿದರು. ತ್ರಾತ್ಸ್ಕಿಯೂ ಒಬ್ಬ ಸಾಹಿತ್ಯವಿಮರ್ಶಕನಾಗಿ ಈ 'ಮಾಟಗಾತಿ–ಬೇಟೆ'ಯಲ್ಲಿ (ವಿಚ್ ಹಂಟಿಂಗ್) ಹತ್ತರಲ್ಲಿ ಹನ್ನೊಂದೆಂಬಂತೆ ತನ್ನ ಕಲ್ಲನ್ನೂ ತೂರಿದ್ದ. ಆರು ವರ್ಷಗಳ ಹಿಂದೆ ಬೇರೊಂದು ಸಂದರ್ಭದಲ್ಲಿ ಅವಳು ಬರೆದಿದ್ದ 'ಹೊರ ಬಾ, ಕುರುಡರ ಕಣ್ಣಿನ ಪೊರೆ ಕಳೆ/ ಆಗ ನೋಡು ತಿಳಿಯುತ್ತದೆ – ಆಪತ್ತಿನ ಅನಿಶ್ಚಿತ ವೇಳೆ / ನಿನ್ನ ಅನುಯಾಯಿಗಳೇ ನಿನ್ನನ್ನು ಹೇಗೆ ಆಡಿಕೊಂಡು ಉಬ್ಬುತ್ತಿರುತ್ತಾರೆಂದು / ಮಂದಿ ಅದೆಷ್ಟು ಉದಾಸೀನರಾಗಿರುತ್ತಾರೆಂದು' (ಕ. ೨೬) ಎಂಬ ಮಾತು ಭವಿಷ್ಯವಾಣಿಯಾಗಿ ಈಗ ಅಕ್ಷರಶಃ ನಿಜವಾಯಿತು. ಮುಂದಿನ ಒಂದೆರಡು ವರ್ಷ ಹಳೆಯ ಪುಸ್ತಕಗಳು ಹಾಗೂ ಹೀಗೂ ಪುನರ್ಮುದ್ರಿತವಾಗುತ್ತಿದ್ದವು. ಪತ್ರಿಕೆಗಳಲ್ಲಿ ಒಂದೊಂದು ಕವಿತೆ ಅಚ್ಚಾಗುತ್ತಿತ್ತು. ಆಮೇಲೆ ಅದೂ ನಿಂತು ಮುಂದಿನ ಹತ್ತೊಂಬತ್ತು ವರ್ಷಗಳು ಅವಳ ಯಾವೊಂದು ಸಂಗ್ರಹವೂ ಪ್ರಕಟವಾಗಲಿಲ್ಲ. ಕಾವ್ಯರಚನೆ ಪೂರ್ಣವಾಗಿ ನಿಲ್ಲದಿದ್ದರೂ ಕಡಿಮೆಯಾಗುತ್ತ ಹೋಯಿತು. ಆ ದೀರ್ಘಾವಧಿಯಲ್ಲಿ ಅವಳು ಬರೆದದ್ದು ಹೆಚ್ಚೆಂದರೆ ವರ್ಷಕ್ಕೆರಡು ಕವಿತೆ. ಈ ಕಾವ್ಯನಿಷ್ಕ್ರಿಯ ಕಾಲದಲ್ಲಿ ಅವಳ ಮನಸ್ಸು ಅಧ್ಯಯನ, ಸಂಶೋಧನೆಗಳ ಕಡೆಗೆ ತಿರುಗಿತು. ಪುಷ್ಕಿನ್‌ನ ಕೃತಿಗಳನ್ನೆಲ್ಲ ಆಳವಾಗಿ ಅಭ್ಯಸಿಸಿದಳು. ಪೀಟರ್ಸ್‌ಬರ್ಗ್‌ನ

ವಾಸ್ತುಶಿಲ್ಪಗಳ ಮೇಲೆ ಸಂಶೋಧನೆ ನಡೆಸಿದಳು. ಪುಷ್ಕಿನ್‌ನ ಮೇಲಿನ ಲೇಖನಗಳು ಪ್ರಕಟವಾಗಿ ಅವಳ ವಿದ್ವತ್ತಿಗೆ ಸಾಕ್ಷಿಯಾದವು.

ಆನಾಳ ದುರ್ದೈವ. ಅವಳಿಗೆ ಒಂಟಿ ಬದುಕುವುದೂ ಸಾಧ್ಯವಿರಲಿಲ್ಲ, ಗಂಡಿನ ಜತೆ ಬಾಳುವುದೂ ಸಾಧ್ಯವಿರಲಿಲ್ಲ. ಶಿಲೆಯ್‌ಕೊನಿಂದ ಬಿಡಿಸಿಕೊಳ್ಳುವ ಹೊತ್ತಿಗೆ ಮೂರನೆಯವನೊಬ್ಬ ನಿಕೊಲಯ್ ಪ್ಯೂನಿನ್ ಗಂಟುಬಿದ್ದ, ಅವನು ಕಲಾಇತಿಹಾಸ ಪಂಡಿತ. ಅವನಿಗಾಗಲೇ ಮದುವೆಯಾಗಿ ಮಕ್ಕಳಿದ್ದವು. ಆನಾ ಅವನೊಡನೆ ಇರಲು ಒಪ್ಪಿ ಅವನ ಮನೆಗೆ ಬಂದಳು, ಅವನ ಹೆಂಡತಿಯಾಗಿ. ಅವನ ಮೊದಲ ಹೆಂಡತಿ ಮಕ್ಕಳೊಂದಿಗೇ ಇರತೊಡಗಿದಳು. ಅಧಿಕೃತವಾಗಿ ಮದುವೆಯಾಗಲಿಲ್ಲ. ಆಗಿನ ರಷ್ಯದ ಅವ್ಯವಸ್ಥಿತ ಸಾಮಾಜಿಕ ಸ್ಥಿತಿಯಲ್ಲಿ ಅದು ಮುಖ್ಯವೂ ಆಗಿರಲಿಲ್ಲ. ಅವನೋ ಕಿಡಿಗೇಡಿ. ಪ್ರೀತಿ–ದ್ವೇಷ, ಬೇಕು–ಬೇಡಗಳ ವಿಪರೀತಗಳ ನಡುವೆ ಅವಳನ್ನು ನಡಸಿಕೊಳ್ಳುತ್ತಿದ್ದ, ಗಾಳಕ್ಕೆ ಸಿಕ್ಕ ಮೀನನ್ನು ಹೊರಗೂ ಹಾಕದೆ ನೀರಿಗೂ ಬಿಡದೆ ಎತ್ತಿ ಇಳಿಸಿ ಆಡಿಸಿದಂತೆ. ಈ ಬಂಧನದ ಬಾಂಧವ್ಯ ಸುಮಾರು ೧೯೩೮ರವರೆಗೂ ಮುಂದುವರಿಯಿತು. ಆನಾಳ ಜೀವನದಲ್ಲಿ ಒಬ್ಬ ಗಂಡಸಿನೊಂದಿಗೆ ಅತ್ಯಂತ ದೀರ್ಘಕಾಲ ತಾಳಿಬಂದ ಕೂಡಿಕೆಯೆಂದರೆ ಇದೊಂದೇ. ಆನಾ ಮೂವರು ಗಂಡಂದಿರೊಂದಿಗೆ ದಾಂಪತ್ಯ ಮಾಡಿ ಅವರೊಡನಿದ್ದಾಗ ಬಗೆಬಗೆಯ ನೋವನ್ನನುಭವಿಸುತ್ತ ಆ ನೋವಿನ ಕುದಿಯನ್ನು ಕವಿತೆಯಲ್ಲಿ ಉಕ್ಕಿಸಿದರೂ ಅವರಿಂದ ದೂರವಾದ ಮೇಲೆ, ಇಲ್ಲವೇ ಅವರು ತೀರಿಕೊಂಡ ಮೇಲೆ ಪ್ರೀತಿಯ ನಿಷ್ಠೆ ತೋರುತ್ತಿದ್ದಳು. ದೀರ್ಘದ್ವೇಷ, ಸೇಡು ಅವಳಿಗೆ ಹೇಳಿದ್ದಲ್ಲ. ಪ್ಯೂನಿನ್ ಸ್ತಾಲಿನ್‌ನ ಅತ್ಯಾಚಾರಕ್ಕೆ ಬಲಿಯಾಗಿ ಸೆರೆಕಂಡಾಗ ಹಾಗೂ ಮುಂದೆ ಶ್ರಮಶಿಬಿರದಲ್ಲಿ ಸತ್ತಾಗ, ಹಿಂದೆ ಗುಮಿಲ್ಯೊವ್‌ಗೆ ದುಃಖಿಸಿದಂತೆಯೇ ದುಃಖಿಸಿ ಬರೆದ ಮರ್ಮಸ್ಪರ್ಶಿ ಕವಿತೆಗಳು ಈ ಮಾತಿಗೆ ಪ್ರಮಾಣನೀಡುತ್ತವೆ ('ರಿಕ್ವಿಯಂ' : ಕ. I, ಕ. ೭೧ ಇತ್ಯಾದಿ).

ಎರಡನೆಯ ದಶಕದ ಕೊನೆಯ ಹೊತ್ತಿಗೆ ರಷ್ಯದಲ್ಲಿ ರಾಷ್ಟ್ರೀಕರಣ ಬಲಗೊಂಡು, ಅದಕ್ಕೆ ತಕ್ಕಂತೆ ಸಾಹಿತ್ಯವೂ ಬದಲಾಯಿತು. 'ಜನವಾದಿ' (ಪ್ರೊಲೆಟೇರಿಯನ್) ಲೇಖಕ ಚಳವಳಿ ಬೆಳೆದಂತೆ ಅದು ಹಿಡಿದ ದಾರಿ ಹಿಂದೆ ಕ್ರಾಂತಿಗಾಗಿ ತನ್ನ ಲೇಖನಿಯನ್ನು ದುಡಿಸಿದ್ದ ಮಾಯಕೊವಸ್ಕಿಯನ್ನೂ ಎದೆಗುಂದಿಸಿತ್ತು. ಅವನು ಇತ್ತೀಚೆಗೆ ಬರೆದು ಆಡಿಸಿದ್ದ 'ತಿಗಣೆ' ನಾಟಕವನ್ನು ಅವರು ಕಟುವಾಗಿ ಟೀಕಿಸಿದ್ದರು. ಕಾರಣವೇನೇ ಇರಲಿ, ಅವನು ಆತ್ಮಹತ್ಯೆ ಮಾಡಿಕೊಂಡ. ಕಮ್ಯುನಿಸ್ಟ್ ಪಕ್ಷ ಎಲ್ಲ ಬಗೆಯ ಸ್ವಂತದ ಸಾಹಿತ್ಯಿಕ ಚಟುವಟಿಕೆಗಳಿಗೂ ಬಹಿಷ್ಕಾರ ಹಾಕಿ ೧೯೩೨ ರಲ್ಲಿ 'ರೈಟರ್ಸ್ ಯೂನಿಯನ್' ಅನ್ನು ಸ್ಥಾಪಿಸಿತು. ಸಾಹಿತಿಗಳಲ್ಲಿ ಅನೇಕರು ಪಕ್ಷ–ಸರಕಾರಗಳ ಬಾಲಹಿಡಕರಾದರು.

ಲೆನಿನ್‌ನ ನಿಧನಾನಂತರ ರಷ್ಯದ ರಾಜಕಾರಣ ದಿನೇ ದಿನೇ ಹದಗೆಡುತ್ತ ನಡೆದಿತ್ತು. ಅವನು ಬದುಕಿದ್ದಾಗ ಅವನ ಕೈಕೆಳಗೆ ಮುಂಪಡೆಯಲ್ಲಿದ್ದ ಮುಖಂಡರ ನಡುವೆ ಒಳಗೊಳಗೇ ಗದ್ದುಗೆಗೆ ಕಿತ್ತಾಟ ಹತ್ತಿಕೊಂಡಿತು. ಅವರಲ್ಲೆಲ್ಲ ಸ್ತಾಲಿನ್ ಅತ್ಯಂತ ಮಹತ್ವಾಕಾಂಕ್ಷಿ, ಕುಟಿಲ ವ್ಯವಹಾರಸ್ಥ, ತನ್ನ ಸ್ಥಾನದ ಭದ್ರತೆಗಾಗಿ ಯಾರನ್ನೂ ಮುಗಿಸದೆ ಬಿಡದ ಕೊಲೆಗಡಿಕ. ಪಕ್ಷದ ವಿರೋಧಿಗಳೆಂಬ ಮಸಿಬಳಿದು ತ್ರಾತ್ಸ್ಕಿ, ಕಿರೋವ್

ಆದಿಯಾಗಿ ಇದ್ದೆಲ್ಲ ಎದುರಾಳಿಗಳನ್ನೂ ಅಳಿಸಿ ಹಾಕಿದ. ಎಲ್ಲಿ ವಿರೋಧದ ಒಂದು ಸೀಳುದನಿ ಕೇಳಿಬಂದರೂ 'ಪಕ್ಷದ ಹಿತದೃಷ್ಟಿಯಿಂದ' ಎಂಬ ನೆಪಹೂಡಿ ಅವರನ್ನು ಬಂಧಿಸಿ, ಶ್ರಮಶಿಬಿರಗಳಿಗೆ ಸಾಗಿಸಿ ಅಲ್ಲಿ ಅವರ ಕೊನೆಗಾಣಿಸಲು ಷುರುಮಾಡಿದ. ಇಂತಹ ಸರ್ವಾಧಿಕಾರಿಗಳಿಗೆ ಅವರದೇ ಎಡಗೈ, ಬಲಗೈಗಳಿರುತ್ತಾರೆ. ಭೀತಿ, ಸ್ವಾಭ್ಯುದಯದ ಬಯಕೆ, ನಾಯಕನಿಷ್ಠೆ, ವೀರಪೂಜೆಗಳು ಅವರನ್ನು 'ಕಾರ್ಯನಿರತ'ರನ್ನಾಗಿ ಮಾಡುತ್ತವೆ. ಅವರಿಗೆ ಒಂದು ಕಣ್ಣಸನ್ನೆ ಸಾಕು. ಆನೇಕ ಬಾರಿ ನಾಯಕನ ಮನಸ್ಸಿನಲ್ಲಿರುವುದನ್ನು ತಾವೇ ಮುಂದಾಗಿ ಊಹಿಸಿ, ಯಾವದಕ್ಕೆ ಏನು ಅಗತ್ಯ ಎಂದು ಸೂಚಿಸುತ್ತಾರೆ. ನಾಯಕ ಅದರ ಜವಾಬ್ದಾರಿಯನ್ನು ಅವರ ಹೆಗಲಿಗೇ ಕಟ್ಟಿ ಕಾದು ಕೂರುತ್ತಾನೆ. ಅವರಲ್ಲಿ ಯಾರೊಬ್ಬರೂ ದೀರ್ಘಕಾಲ ಉಳಿಯುವುದಿಲ್ಲ. ಕೈಬದಲಾಗುತ್ತಿರುತ್ತದೆ. ಒಬ್ಬ ಕೆಲಸದಲ್ಲಿ ಹಿಂದೆ ಬಿದ್ದರೆ ಅಥವಾ ಅವನ ಅತಿವರ್ತನೆಯಿಂದ ನಾಯಕನಿಗೆ ಕೆಟ್ಟ ಹೆಸರು ಬರತೊಡಗಿದರೆ, ಇಲ್ಲವೇ ಅವನಿಗೆ ರಹಸ್ಯ ತುಂಬ ತಿಳಿದಿದೆಯೆಂದಾದರೆ ಅವನ ಕತೆ ಮುಗಿಯಿತು. ಸ್ತಾಲಿನ್‌ಗೂ ಇಂತಹವರು ಅನೇಕರಾದರು – ಯಗೋದಾ, ಯೆಷೋವ್, ಬೆರಿಯಾ, ಷ್ದಾನೋವ್. ಸ್ತಾಲಿನ್‌ನ ದಮನಚಕ್ರಕ್ಕೆ ಬಲಿಯಾಗಿ ಜೀವತೆತ್ತವರ ಸಂಖ್ಯೆ ಹತ್ತಾರು ಲಕ್ಷ. ಅವರಲ್ಲಿ ಬುದ್ಧಿಜೀವಿಗಳು ಸಾವಿರಗಟ್ಟಲೆ. ಈ ನರಯಜ್ಞದಲ್ಲಿ ಯೂನಿಯನ್ ಆಫ್ ರೈಟರ್ಸ್ ವಿಧೇಯವಾಗಿ ಆರುನೂರು ಜನ 'ವಿನಾಶಯೋಗ್ಯ' ಲೇಖಕರ ಪಟ್ಟಿ ಒದಗಿಸಿತೆಂದು ಕಾದಂಬರಿಕಾರ ಸೋಲ್ಜೆನಿತ್‌ಜಿನ್ ಹೇಳಿದ್ದಾನೆ. ಅವರು ಅನುಭವಿಸಬೇಕಾಗಿ ಬಂದ ವಿವಿಧ ದುರ್ಗತಿಗಳೆಂದರೆ – ದಮನ, ದೂಷಣೆ, ದೇಶೋಚ್ಚಾಟನೆ, ಚಿತ್ರಹಿಂಸೆ, ಆತ್ಮಹತ್ಯೆಗೆ ಪ್ರೇರಣೆ. ಇವೆಲ್ಲವೂ ಅವರ ಬಾಯಿ ಮುಚ್ಚಿಸದಿದ್ದರೆ ಗುಂಡಿಟ್ಟು ಹತ್ಯೆ.

ದಮನಕಾಂಡ ಮೊದಲ ಸುತ್ತಿನಲ್ಲಿ ಪ್ರಕೋಪಕ್ಕೇರಿದ್ದು ಯೆಷೋವ್ ಎಂಬವನು ಗುಪ್ತಚರ ವಿಭಾಗದ ಮೇಲಧಿಕಾರಿಯಾಗಿದ್ದಾಗ. ಆಗ ಅದಕ್ಕೆ ಬಲಿಯಾದವರಲ್ಲಿ ಆನಾಳ ಮಗ ಲೆವ್ ಮತ್ತು ಮೂರನೆಯ ಗಂಡ ಪ್ಯೂನಿನ್‌ರೂ ಇದ್ದರು. ಲೆವ್‌ನ ಮೇಲಿನ ಕೋಪಕ್ಕೆ ಅವನು ಕ್ರಾಂತಿವಿರೋಧಿ ಗುಮಿಲ್ಯೊವ್ ಮತ್ತು ವ್ಯಕ್ತಿನಿಷ್ಠ ಕವಿ ಆನಾಳ ಮಗನೆಂಬುದು. ೧೯೩೫ ರಲ್ಲಿ ಸ್ತಾಲಿನ್ ಸರಕಾರ ಅವನನ್ನು ಬಂಧಿಸಿ ಕರೆದೊಯ್ದಿತು. ಅಲ್ಲಿಂದಾಚೆಗೆ ಇಪ್ಪತ್ತು ವರ್ಷಗಳ ಕಾಲ ಆನಾಳ ದುಃಖಜೀವನದ ಶಿಖರಪ್ರಕರಣ. ಆನಾ ಇತರ ನೂರಾರು ಹೆಂಗಸರಂತೆ ಚಳಿಬಿಸಿಲೆನ್ನದೆ ದಿನವೂ ಮುಂಜಾನೆ ನಗರದಂಚಿನವರೆಗೂ ನಡೆದುಹೋಗಿ ಲೆನಿನ್‌ಗ್ರಾದ್ ಸೆರೆಮನೆಯ ಮುಂದೆ ಮಗನ ಗತಿ ಏನಾಯಿತೆಂದು ತಿಳಿಯಲು ಕಾದುಕಾದು ನಿರಾಶಳಾಗಿ ಹಿಂದಿರುಗುತ್ತಿದ್ದಳು. ಅಂದಿನ ಅನುಭವಗಳ ಕಾವ್ಯಫಲ 'ರಿಕ್ವಿಯಂ', ಆನಾಳ ಅತ್ಯಂತ ಸಶಕ್ತ ಕವಿತಾಗುಚ್ಛ, ಅವಳ ಕೃತಿಗಳಲ್ಲೆಲ್ಲ ಎದೆನಡುಕ ಹುಟ್ಟಿಸುವಂತಹದು.

ಲೆವ್, ಪ್ಯೂನಿನ್‌ರಿಗೆ ಒದಗಿದ ದುರ್ಗತಿಯೇ ಇನ್ನೂ ಹೆಚ್ಚು ದಾರುಣವಾಗಿ ಆನಾಳ ಜತೆಕವಿ, ಆಪ್ತಮಿತ್ರ ಮ್ಯಾಂದಲ್‌ಷ್ತಾಮ್‌ಗೂ ಬಂದೊದಗಿತು. ಅವನು ಸ್ತಾಲಿನ್‌ನ ವಿಡಂಬನೆ ಮಾಡಿ ಒಂದು ದಿಟ್ಟ ಸಾನೆಟ್ ಬರೆದು ಎಲ್ಲರಿಗೂ ಓದಿ ತೋರಿಸುತ್ತಿದ್ದ. ಅವನಿಗೆ ಸಾವಿನ ಭಯವಿರಲಿಲ್ಲ, ಆದರೆ ಸಾಯುವುದಿದ್ದರೆ ಈ

ತೋಳಗಳ ಕೈಯಿಂದಲ್ಲ ಎನ್ನುತ್ತಿದ್ದ. ಮೇಲೆ ಯೆಹೂದಿ ಬೇರೆ. ಜೀವಮಾನಪೂರ್ತಿ ಇರಲು ನೆಲೆಯಿಲ್ಲದೆ ಹೆಂಡತಿ ನಜ್ಜೆಷ್ದಾಳೊಂದಿಗೆ ಬರಿಯ ಒಂದು ಪೆಟ್ಟಿಗೆಯೇ ಆಸ್ತಿಯಾಗಿ ಊರಿಂದೂರಿಗೆ ಅಲೆಯುತ್ತ ಸ್ನೇಹಿತರ ಮನೆಗಳಲ್ಲಿ ಒಂದೊಂದು ರಾತ್ರಿ ಕಾಲ ಹಾಕುತ್ತ ಬದುಕು ತಳ್ಳಿದ ಪ್ರತಿಭಾವಂತ ಕವಿ. ಅವನಿಗೆ ತಂಗಲು ಜಾಗಕೊಟ್ಟ ಸ್ನೇಹಿತರನ್ನೂ ಸರಕಾರ ಬಿಡುತ್ತಿರಲಿಲ್ಲ. ಅವನು ಕೊನೆಗೆ ಸೆರೆಸಿಕ್ಕು, ಶ್ರಮಶಿಬಿರದಲ್ಲಿ ಸತ್ತ. ಅವನು ನತ್ತ ಸುದ್ದಿ ಸಹ ಬಂಧುಮಿತ್ರರಿಗೆ ತಿಳಿದದ್ದು ಎರಡು ವರ್ಷಗಳ ಮೇಲೆ. ಸತ್ತ ತಾರೀಕು ಸಹ ಇಂದಿಗೂ ಅಂದಾಜೇ. ಅವನದು ಒಂದು ರೀತಿಯಲ್ಲಿ ಗುಮಿಲ್ಯೊವ್‌ನ ದುರಂತದ ಪುನರಾವೃತ್ತಿ.

ಮೊದಲ ಯುದ್ಧವಾಯಿತು, ಕ್ರಾಂತಿ ಒಳಯುದ್ಧಗಳಾದವು, ಜನದಮನ ವಾಯಿತು. ಆನಾ ಒಂದು ಕವಿತೆಯಲ್ಲಿ ಐದೇ ಪದಗಳಲ್ಲಿ ನುಡಿಗಟ್ಟಾಗಿ ಹೇಳಿದಂತೆ 'ರಕ್ತವೆಂದರೆ ಅದೆಷ್ಟು ಪ್ರೀತಿ / ರಷ್ಯದ ನೆಲಕ್ಕೆ!' (ಕ. ೪೪). ಈಗ ಎರಡನೆ ಮಹಾಯುದ್ಧ. ಆ ಹೊತ್ತಿಗಾಗಲೇ ಇದ್ದ ಪ್ರತಿಸ್ಪರ್ಧಿಗಳನ್ನೆಲ್ಲ ಅಳಿಸಿಹಾಕಿ, ಬಹಿರಂಗ ವಿರೋಧದ ಹೆಸರಿಲ್ಲದಂತೆ ಮಾಡಿ ಗದ್ದುಗೆಯನ್ನು ಭದ್ರಗೊಳಿಸಿಕೊಂಡಿದ್ದ ಸ್ತಾಲಿನ್‌ಗೆ ಈಗ ಆಂತರಿಕವಾಗಿ ಅಷ್ಟಾಗಿ ಭಯವಿರಲಿಲ್ಲ. ಅಲ್ಲದೆ ಯುದ್ಧದಲ್ಲಿ ಗೆಲುವಾಗಬೇಕಾದರೆ ಎಲ್ಲರ ಸಹಕಾರವೂ ಅಗತ್ಯವೆಂಬ ಕುಟಿಲತಂತ್ರ. ರಷ್ಯದ ಒಳವ್ಯವಹಾರಗಳಲ್ಲಿ ಸಡಿಲಿಕೆಯುಂಟಾಯಿತು. ಸರಕಾರ ಆನಾಳ ಮೇಲಿನ ಬಹಿಷ್ಕಾರವನ್ನು ತೆಗೆಯಿತು. ಇನ್ನೂ ಮುಂದೆ ಹೋಗಿ ಅವಳನ್ನು ರೈಟರ್ಸ್ ಯೂನಿಯನ್‌ನ ಸದಸ್ಯಳನ್ನಾಗಿ ಮಾಡಿತು. ಭಾಗ್ಯದ ಉಬ್ಬರಪಿಳಿತಗಳ ಉಯ್ಯಾಲೆಯಾಟದಲ್ಲಿ ಅವಳು ಮತ್ತೆ ಮೇಲೆದ್ದಳು. ಪ್ರಕಟವಾಗದೆ ಉಳಿದಿದ್ದ 'ಹೊಳೆಜೊಂಡು' ಸಂಗ್ರಹವೂ ಸೇರಿದಂತೆ 'ಆರು ಸಂಗ್ರಹಗಳಿಂದ' ಎಂಬ ಸಮಗ್ರಕಾವ್ಯ ಪ್ರಕಟವಾಯಿತು. ಹತ್ತೊಂಬತ್ತು ವರ್ಷಗಳ ಅಜ್ಞಾತವಾಸದ ನಂತರವೂ ಜನ ಅವಳನ್ನು ಮರೆತಿರಲಿಲ್ಲ. ಆ ಯುದ್ಧದ ದಿನಗಳಲ್ಲಿ ಅದನ್ನು ಕೊಳ್ಳಲು ಬರುತ್ತಿದ್ದ ಜನರ ಸಾಲು ನಾಲ್ಕು ಬೀದಿಗಳಷ್ಟು ಉದ್ದವಿರುತ್ತಿತ್ತಂತೆ. ಬೇಡಿಕೆ ಹೆಚ್ಚಿದಂತ ಕೆಲವೇ ತಿಂಗಳಲ್ಲಿ ಅದು ಇದ್ದೂ ಇಲ್ಲವಾಯಿತು. ಅದರ ಯಶಸ್ಸು ಸ್ತಾಲಿನ್‌ನ ಕಿವಿಗೆ ಬಿದ್ದಾಗ ಅವನು ಮಾರಾಟ ನಿಲ್ಲಿಸಿ ಉಳಿದ ಪ್ರತಿಗಳನ್ನು ರಹಸ್ಯವಾಗಿ ನಾಶಮಾಡಲು ಅಪ್ಪಣೆ ಕೊಟ್ಟನಂತೆ. ಸಾಧಾರಣವಾಗಿ ರಷ್ಯದಲ್ಲಿ ಈಗಲೂ ಅಂತಹ ಒಂದು ಸಮಗ್ರದ ಬೆಲೆ ಎರಡು ರೂಬಲ್ಲಾದರೆ ಆನಾಳ ಈ ಸಮಗ್ರ 'ಮರುಖರೀದಿ'ಯಲ್ಲಿ ೧೫೦ ರೂಬಲ್ಲುಗಳಿಗೆ ಮಾರಾಟವಾಗುತ್ತಿತ್ತಂತೆ. ಪಾಸ್ತರ್‌ನಾಕ್ ಈ ಬಗ್ಗೆ ಬರೆದಿದ್ದಾನೆ.

ಆನಾ ಮತ್ತೆ ಕಾವ್ಯರಚನೆಗೆ ಆರಂಭಿಸಿದಳು. ಮುಂದಿನ ವರ್ಷಗಳಲ್ಲಿ ಯುದ್ಧ ಒಂದು ಪ್ರಮುಖವಸ್ತುವಾಗಿ 'ಯುದ್ಧದ ಗಾಳಿ' ಎಂಬೊಂದು ಕವಿತಾಗುಚ್ಛವೇ ಒಟ್ಟಾಯಿತು (ಕ. ೬೨ ರಿಂದ ೬೫). 'ಧೈರ್ಯ' ಎಂಬುದೊಂದು ಅವಳ ಹೆಸರಾಂತ ಕವಿತೆ. ಅದರಲ್ಲಿ ರಷ್ಯಭಾಷೆಯನ್ನು ಅಳಿಯಗೊಡದೆ ಎಂತಹ ಸ್ಥಿತಿಯಲ್ಲಿಯೂ ಅದನ್ನು ಉಳಿಸಿ ಮುಂದಿನ ತಲೆಮಾರಿಗೆ ಕೊಡುವ ಮಾತಿದೆ. ಎಂಥದೇ ದುಃಖದ ಸ್ಥಿತಿಯಲ್ಲಿಯೂ ತತ್‌ಕ್ಷಣ ಹತಾಶ ಳಾದರೂ ಅದಕ್ಕಾಗಿ ಸ್ವಾನುಕಂಪದಿಂದ ಮರುಗುವ ಬದಲು ಧೈರ್ಯದಿಂದ ಎದುರಿಸುವುದನ್ನು ಆನಾ ಕಲಿತಳು. 'ಇದು ನನ್ನ ಜೀವನವೂ ಹೌದು, ಜೀವನಚರಿತ್ರೆಯೂ ಹೌದು.

ಅವರವರ ಬಾಳನ್ನು ಬಾಳಲು ನಿರಾಕರಿಸುವವರಾರು?' ಎನ್ನುತ್ತಿದ್ದಳು. ಈ ಧೈರ್ಯ ಕೊಡುವಲ್ಲಿ ಕವಿತೆ ಅವಳಿಗೆ ನೆರವಾಯಿತು. ತನ್ನ ದುಃಖ ಕಷ್ಟಗಳಲ್ಲಿ ಜನರ ದುಃಖಕಷ್ಟಗಳನ್ನು ಗುರುತಿಸಿಕೊಂಡು, ಅದನ್ನು ಕವಿತಾಧ್ವನಿಯನ್ನಾಗಿ ಮಂತ್ರಿಸಿ ಮಾರ್ಪಡಿಸಿ ಓದುಗರ ಎದೆಗ ಆ ನೋವನ್ನು ಮುಟ್ಟಿಸುವುದು ಅವಳ ಬಗೆ. ಇತರ ಕಾವ್ಯವಸ್ತುಗಳೊಂದಿಗೆ ಕವಿತೆಯೂ ಒಂದಾಯಿತು. ಕಾವ್ಯದ ಮರ್ಮ, ಹಿರಿಮೆ, ಮಹಿಮೆಗಳನ್ನು ಕುರಿತು ಆಳವಾಗಿ ಚಿಂತಿಸಿ ಹಲವಾರು ಕವಿತೆಗಳನ್ನು ಬರೆದಳು (ಕ. ೪೬, ೫೪–೫೬).

ಹಿಂದೆ ಜನವಾದಿ ಲೇಖಕರ ಖಂಡನೆಗೆ ಗುರಿಯಾಗಿದ್ದಾಗ ಆನಾ ತಾನು ಹೇಳಬೇಕಾದ್ದನ್ನು ಹೇಳಲು ಒಂದು ಕುಶಲ ಕಾವ್ಯವಿಧಾನವನ್ನು ಕಂಡುಕೊಂಡಿದ್ದಳು. ಅದೆಂದರೆ ತನ್ನ ಬದುಕಿನ ಸಂಗತಿಗಳಿಗೆ ಹೋಲುವ ಬೈಬಲ್ ಮತ್ತು ಪುರಾಣೇತಿಹಾಸ ಪುರುಷರ ಜೀವನದ ಸಂಗತಿಗಳನ್ನು ಆರಿಸಿಕೊಂಡು ಅವನ್ನು ತನ್ನ ಬದುಕಿಗೆ ಅನ್ವಯಿಸಿ, ಆ ವಸ್ತುನಿಷ್ಠ ವಿಷಯಗಳ ಮೇಲೆ ವ್ಯಕ್ತಿನಿಷ್ಠವಾಗಿ ಬರೆಯುವುದು – ಒಮ್ಮೆ ದಾಂತೆಯಾಗಿ (ಕ. ೫೧), ಮತ್ತೊಮ್ಮೆ ಲಾಟ್‌ನ ಹೆಂಡತಿಯಾಗಿ, ಮಗ ಲೆವ್‌ನನ್ನು ಶಿಲುಬೆಗೇರಿದ ಏಸುವಿಗೆ ಹೋಲಿಸಿ ತಾನು ತಾಯಿ ಮೇರಿಯಾಗಿ ('ರಿಕ್ವಿಯಂ', X) ಇತ್ಯಾದಿ. ಈ ವಿಧಾನವೂ ಈಗ ಮುಂದುವರೆಯಿತು.

ಯುದ್ಧ ನಡೆದಿತ್ತು. ಹಿಟ್ಲರ್‌ನಿಗೆ ತನ್ನ ಬರ್ಲಿನ್ ಬಿಟ್ಟು ಜಗತ್ತಿನಲ್ಲಿ ಬೇರೆ ಯಾವ ಮಹಾನಗರವೂ ಇರಬಾರದು. ಅವೆಲ್ಲ ನಾಶವಾಗಬೇಕು, ದೇಶ, ಜನ ನಾಶವಾಗುವಂತೆ. ಅವನು ಪ್ಯಾರಿಸ್ ನಗರವನ್ನು ನಿರ್ನಾಮ ಮಾಡಲು ಏನೆಲ್ಲ ಮಾಡಿದನೆಂಬುದು, ಅದನ್ನು ಹೇಗೆ ಒಬ್ಬ ಜರ್ಮನ್ ಸೇನಾಧಿಪತಿಯೇ ಉಳಿಸಿದನೆಂಬುದು ಈಗ ಇತಿಹಾಸಪ್ರಸಿದ್ಧ. ಲೆನಿನ್‌ಗ್ರಾಡ್‌ಗೂ ಅಂತಹದೇ ಗತಿ ಕಾದಿತ್ತು. ಜರ್ಮನ್ ಸೇನೆ ನಾಲ್ಕೂ ಕಡೆಯಿಂದ ಅದಕ್ಕೆ ದಿಗ್ಬಂಧನ ಹಾಕಿತು. ಯಾರೂ, ಏನೊಂದೂ ಒಳಬರುವಂತಿಲ್ಲ. ಒಂದಲ್ಲ, ಒಂಬೈನೂರು ದಿನಗಳು, ಹತ್ತಿರ ಹತ್ತಿರ ಮೂರುವರ್ಷ. ಅದರ ಸುಳಿವು ಕಂಡುಕೊಂಡ ರಷ್ಯ ಅದರ ಪ್ರಮುಖ ನಾಗರಿಕರನ್ನೆಲ್ಲ ಮೊದಲೇ ನಗರದ ಹೊರಗೆ ಸಾಗಿಸಿತು. ಆನಾಳೂ ಅವರಲ್ಲೊಬ್ಬಳು ! ಈಗ ಅವಳು ತಾಷ್ಕೆಂಟಿನಲ್ಲಿ, ಪೂರಾ ಮೂರು ವರ್ಷ. ಹೊಸ ಪ್ರಪಂಚ, ಹೊಸ ಜನ, ಹೊಸ ಕವಿತೆಗಳು, ಅಲ್ಲಿದ್ದಾಗ ಆಸ್ಪತ್ರೆಗಳಲ್ಲಿ ಗಾಯಗೊಂಡು ಚಿಕಿತ್ಸೆ ಪಡೆಯುತ್ತಿರುವ ಸೈನಿಕರ ಹಾಸಿಗೆಯ ಬಳಿ ಕೂತು, ತನ್ನ ಕವಿತೆಗಳನ್ನು ಓದಿಹೇಳಿ ಧೈರ್ಯ, ಸಾಂತ್ವನ ನೀಡುತ್ತಿದ್ದಳು.

ಕೊನೆಗೂ ಜರ್ಮನಿ ಸೋತಿತು. ರಷ್ಯದ ಜನತೆಯ ಅಸೀಮ ಧೈರ್ಯ, ಪರಾಕ್ರಮ, ಕಷ್ಟಸಹಿಷ್ಣುತೆಗಳಿಂದಾಗಿ ಆನಾಳ ಲೆನಿನ್‌ಗ್ರಾಡ್ ಉಳಿದುಕೊಂಡಿತು. ಆನಾ ತಾಷ್ಕೆಂಟಿನ ವಾಸ ಮುಗಿಸಿ ತನ್ನೂರಿಗೆ ಹಿಂದಿರುಗಿದಳು. ದಾರಿಯಲ್ಲಿ ಮಾಸ್ಕೊದಲ್ಲಿ ಕೆಲವು ದಿನ ತಂಗಿದ್ದಳು. ಆಗ ಅಲ್ಲಿ ಅವಳದೊಂದು ಕಾವ್ಯವಾಚನವಾಯಿತು. ಸೇರಿದ್ದ ಜನ ಮೂರುಸಾವಿರ. ಕಾರ್ಯಕ್ರಮದ ಕೊನೆಗೆ ಎಲ್ಲರೂ ಎದ್ದುನಿಂತು ಚಪ್ಪಾಳೆ ತಟ್ಟಿದರು. ಅದೂ ಖುದ್ದಾಗಿ ಆನಾಳನ್ನೇ ದಿಗ್ಭ್ರಾಂತಗೊಳಿಸಿತು. ಆ ಚಪ್ಪಾಳೆಯ ಗಡಗಡ ಕ್ರೆಮ್ಲಿನ್‌ನ ಗೋಡೆಗಳನ್ನು ನಡುಗಿಸಲು ಹೆಚ್ಚು ಕಾಲ ಹಿಡಿಯಲಿಲ್ಲ. ಸ್ಟಾಲಿನ್ ಕಾರ್ಯದರ್ಶಿಯನ್ನು ಕರೆದು ಈ ಜಯಘೋಷಕ್ಕೆ ಯಾರು ಅಪ್ಪಣೆ ಕೊಟ್ಟವರು ಎಂದು

ಯುದ್ಧ ನಿಂತಂತೆ ಮತ್ತೊಮ್ಮೆ ಭೀತಿಯುಗ, ದಮನಕಾಂಡಗಳ ಪುನರಾವರ್ತನೆ. ಈಗ ಸ್ತಾಲಿನ್‌ಗೆ ಒಬ್ಬ ಸಲಹೆಗಾರನಿದ್ದ – ಷ್ದಾನೋವ್. ಹಿಂದೆ ಯೆಷೋವ್ ತುಳಿದ ಹಾದಿಯಲ್ಲೇ ನಡೆದಿದ್ದ. ಮೊತ್ತಮೊದಲು ಅವನ ಕಣ್ಣುಬಿದ್ದದ್ದು ಆನಾಳ ಮೇಲೆ. ಅವಳ ಭಾಗ್ಯಚಕ್ರ ಇನ್ನೊಂದು ಸುತ್ತು ಹೊಡೆಯಿತು. ಇಪ್ಪತ್ತು ವರ್ಷಗಳ ಹಿಂದೆ ಒಬ್ಬ ವಿಮರ್ಶಕ ಅವಳ ಕವಿತೆಗಳನ್ನು ವಿಶ್ಲೇಷಿಸಿ, ಅಲ್ಲಿನ ಐಂದ್ರಿಯಕ ಮತ್ತು ಆಧ್ಯಾತ್ಮಿಕ ಒಲವುಗಳನ್ನು ಗುರುತಿಸಿದ್ದ. ಈಗ ಷ್ದಾನೋವ್ ಅದನ್ನೆತ್ತಿಕೊಂಡು ತಿರುಚಿ, ಅವಳನ್ನು 'ಅರೆ–ಸೂಳೆ', 'ಅರೆ–ಸನ್ಯಾಸಿನಿ' ಎಂದು ಹೀಯಾಳಿಸಿ ಸ್ತಾಲಿನ್‌ಗೆ ವರದಿ ಮಾಡಿದ. ಅವಳ ಗೀತಧ್ವನಿ ಪುನರ್‌ರಚನೆಗೆ ತೊಡಗಬೇಕಾಗಿದ್ದ ದೇಶಕ್ಕೆ ಅಪಾಯಕಾರಿ ಎಂದು ಸಿದ್ಧವಾಯಿತು. ಭಾವಗೀತೆ ಹೆದರಿ ಹಿಂದೆ ಬಿದ್ದಿತು. ಆಗ ಲೆನಿನ್‌ಗ್ರಾದ್‌ನಿಂದ ಬಂದ ಒಂದು ವರದಿಯಲ್ಲಿ "ಇಲ್ಲೀಗ ಯಾರೂ ಭಾವಗೀತೆ ಬರೆಯುತ್ತಿಲ್ಲ" ಎನ್ನುವ ಮಟ್ಟಿಗೆ ಸಾಹಿತ್ಯದ ಚಹರೆ ಬದಲಾಯಿತು.

ಆನಾ ಎಂದಿನಂತೆ ಒಂದು ದಿನ ರೈಟರ್ಸ್ ಯೂನಿಯನ್‌ಗೆ ಹೋದಳು. ಯಾರೂ ಮಾತನಾಡಿಸುವವರಿಲ್ಲ, ಎಲ್ಲರೂ ಮುಖತಿರುಗಿಸಿಕೊಂಡು ದೂರ ಸರಿಯುವವರೇ. ದಾರಿಯಲ್ಲಿ ಕೊಂಚ ಹೂಕೊಂಡು ಮನೆಗೆ ಬಂದಳು. ಹೂವನ್ನು ಜಾಡಿಯಲ್ಲಿರಿಸಿ ಅದಕ್ಕೆ ಸುತ್ತಿದ್ದ ಕಾಗದವನ್ನು ಬಿಡಿಸಿದಳು. ಅದರಲ್ಲಿತ್ತು, ಅವಳನ್ನು ರೈಟರ್ಸ್ ಯೂನಿಯನ್‌ನಿಂದ ಹೊರಹಾಕಿದ್ದ ಸುದ್ದಿ. ಅವಳ ಹಾಗೂ ವಿಡಂಬನೆಗೆ ಹೆಸರಾದ ಕಾದಂಬರಿಕಾರ ಜೋಶ್ಚೆಂಕೊನ ಕೃತಿಗಳನ್ನು ಬಹಿಷ್ಕರಿಸಿ, ಅವನ್ನು ಪ್ರಕಟಿಸುತ್ತಿದ್ದ 'ಲೆನಿನ್‌ಗ್ರಾದ್' ಮತ್ತು 'ಜ್ವೆಜ್ದ'ಗಳಿಗೆ ಕೊಡಲಿಪೆಟ್ಟು ಹಾಕಿದ್ದರು. ಈಗ ಮೂರನೆ ಬಾರಿಗೆ ಮಗ ಲೆವ್‌ನ ಬಂಧನವಾಯಿತು. ಮೊದಮೊದಲು ಆನಾ ಬಂದೆರಗಿದ ಬರಸಿಡಿಲಿಗೆ ಕುಸಿದಳು (ಕ. ೭೦). ಮೇಲೆ ಕಾಹಿಲೆ, ದಿನೇ ದಿನೇ ಏರಿಬರುತ್ತಿದ್ದ ಮುಪ್ಪು, ಬಡತನಗಳು ಬೇರೆ. ಆ ಕಾಲದಲ್ಲಿ ಅವಳು ಬದುಕಿದ್ದದ್ದು ಕರಿಯ ಬ್ರೆಡ್ಡು, ಸಕ್ಕರೆಯಿಲ್ಲದ ಚಹದ ಮೇಲೆ. ಆಗೊಮ್ಮೆ ಅವಳನ್ನು ಗುಟ್ಟಾಗಿ ನೋಡಲು ಬಂದ ಬ್ರಿಟಿಷ್ ವಿದ್ವಾಂಸ ಇಸೈಯಾ ಬರ್ಲಿನ್‌ಗೆ ಇಡೀ ರಾತ್ರಿಯ ಆತಿಥ್ಯವಾಗಿ ಸಿಕ್ಕಿದ್ದು ಬೇಯಿಸಿದ ಆಲೂಗಡ್ಡೆ, ಕವಿತೆ, ಮಾತುಕತೆ. ಅವಳಿಗೆ ಉಡಲಿದ್ದದ್ದು ಹರಿದ ಚಿಂದಿಗೌನುಗಳು. ಆ ಚಿಂದಿಯಲ್ಲಿಯೂ ಅವಳು ಗತ್ತುಗಾಂಭೀರ್ಯ ಕಳೆದುಕೊಳ್ಳದೆ ರಾಣಿಯಂತೆ ನಡೆದುಕೊಳ್ಳುತ್ತಿದ್ದಳು. ಧೈರ್ಯ ಕಳೆದುಕೊಳ್ಳಲಿಲ್ಲ. ಅಂದಿನ ಸ್ಥಿತಿಗತಿಗಳನ್ನು ಕುರಿತು ಕವಿತೆ ಬರೆದಳು. ಜತೆಗೇ ಈಗ ಕಾಲ, ಮುಪ್ಪು, ಸಾವುಗಳೂ ಕಾವ್ಯದ ವಿಷಯಗಳಾದವು. ಅಚ್ಚಾಗದಿದ್ದರೇನಂತೆ, ಅವು ಬಾಯಿಂದ ಬಾಯಿಗೆ ಹರಡುತ್ತಿದ್ದವು.

ಈ ಕಾಲದಲ್ಲಿ ಅವಳು ರಚಿಸತೊಡಗಿದ ಇನ್ನೊಂದು ಕೃತಿಯೆಂದರೆ 'ನಾಯಕನಿಲ್ಲದ ಕವಿತೆ'. ಅದರ ರಚನೆ ಸುಮಾರು ಇಪ್ಪತ್ತು ವರ್ಷಗಳಿಗೂ ದೀರ್ಘಕಾಲ ನಡೆಯುತ್ತಲೇ ಹೋಯಿತು. ಅದು ಆನಾ ತನ್ನ ಯೌವನದ ಪೀಟರ್ಸ್‌ಬರ್ಗ್ ನಗರಕ್ಕೆ ಅರ್ಪಿಸಿದ ಶಬ್ದಸ್ಮಾರಕ. ಕ್ನ್ಯಾಜೆವ್‌ನ ಆತ್ಮಹತ್ಯೆಯನ್ನಾಗಿ ಕೇಂದ್ರವಾಗಿರಿಸಿಕೊಂಡು ಅದು ಅಂದಿನ ಅವಳ ಒಡನಾಡಿಗಳನ್ನು, ನಗರದ ವೈಭವ–ಅವನತಿಗಳನ್ನು, ಅವಳದೇ ಆತ್ಮಕತೆಯನ್ನು ಒಳಗೊಂಡ ಸಂಕೀರ್ಣಕೃತಿ, ಬೇರೆ ಯಾರೋ ಬರೆದಿದ್ದಿರಬೇಕು

ಅನಿಸುವಷ್ಟು ಭಿನ್ನ, ಒಂದು ರೀತಿಯಲ್ಲಿ ಎಲಿಯೆಟ್‌ನ 'ದಿ ವೇಸ್ಟ್‌ಲ್ಯಾಂಡ್' ಅನ್ನು ನೆನಪಿಗೆ ತರುತ್ತದೆ. ಸಾಲುಸಾಲಿನಲ್ಲಿ, ಪದಪದದಲ್ಲಿ ವ್ಯಕ್ತಿ ಮತ್ತು ಸಂದರ್ಭಗಳನ್ನು ಕುರಿತ ಸೂಚನೆ, ನಿರ್ದೇಶಗಳಿಂದ ಕೂಡಿದೆ. ಈ ಶತಮಾನದ ಮೊದಲೆರಡು ದಶಕಗಳ ಆನಾಳ ಪೀಟರ್ಸ್‌ಬರ್ಗ್‌ನ ಪೂರ್ಣ ಪರಿಚಯವಿಲ್ಲದೆ ಕವಿತೆ ಅರ್ಥವಾಗುವುದಿಲ್ಲ. ಸ್ವತಃ ಆನಾಳೇ ಅದನ್ನು ತನ್ನ ಕಾವ್ಯದ ಕಿರೀಟವೆನ್ನುತ್ತಿದ್ದಳು.

ಹತ್ತುವರ್ಷ ಕಳೆಯಿತು. ೧೯೫೩. ಇಡೀ ರಷ್ಯದ ಎದೆಭಾರವಿಳಿಸಿದ ವರ್ಷ ಅದು. ಸ್ತಾಲಿನ್ ಸತ್ತ. ಅವನ ದುಷ್ಕೃತ್ಯಗಳನ್ನೆಲ್ಲ ಬಯಲಿಗೆಳೆದು ಅವನ ಸ್ಥಾನಕ್ಕೆ ಕ್ರುಶ್ಚೋವ್ ಬಂದ. ಸದ್ಯಕ್ಕಾದರೂ ಹಿಮಗಡ್ಡೆ ಕರಗತೊಡಗಿತ್ತು. ಮೂರುವರ್ಷಗಳ ನಂತರ ಲೆವ್ ಅಂತಿಮವಾಗಿ ಬಿಡುಗಡೆ ಹೊಂದಿದ. ಅವನು ತನ್ನದಲ್ಲದ ಅಪರಾಧಕ್ಕೆ ಸದಾ ಸಾವಿನ ಭೀತಿ ಹೊತ್ತು ಸೆರಮನೆ, ಶ್ರಮಶಿಬಿರಗಳಲ್ಲಿ ಒಟ್ಟು ಕಳೆದಿದ್ದುದು ಹನ್ನೊಂದು ವರ್ಷ. ಅವನ ಯೌವನ, ನಡುಗಾಲಗಳೆಲ್ಲವೂ ಭಯಭೀತಿ ಆತಂಕ ಗಳಲ್ಲಿಯೇ ಸವೆದುಹೋಗಿದ್ದವು. ಆತ ಈಗ ಇತಿಹಾಸದ ವಿದ್ವಾಂಸ. ಕಳೆದ ವರ್ಷ ರಷ್ಯದ ರಾದುಗಾ ಪ್ರಕಾಶನಕ್ಕೆ ತನ್ನ ತಾಯಿಯ ಒಂದು ಕವಿತಾಸಂಗ್ರಹ ಸಿದ್ಧಮಾಡಿಕೊಟ್ಟ

ಆನಾಳ ಕೊನೆಯ ಹತ್ತುವರ್ಷ ಅಷ್ಟಾಗಿ ಯಾವ ಅಶಾಂತಿಯೂ ಇಲ್ಲದೆ ಕಳೆಯಿತು. 'ರಿಕ್ವಿಯಂ', 'ನಾಯಕನಿಲ್ಲದ ಕವಿತೆ' ಹಾಗೂ ಮತ್ತೆ ಕೆಲವು ಬಿಡಿಕವಿತೆಗಳು ಹೊರಬರಲು ಇನ್ನೂ ಕಾಲ ಪಕ್ವವಾಗಿರಲಿಲ್ಲ. ಆದರೂ ಅವಳ ಅರ್ಧಶತಮಾನದ ಕವಿತೆಗಳೆಲ್ಲ ಒಟ್ಟುಗೂಡಿ ಒಂದು ಮಹಾಸಮಗ್ರ 'ಕಾಲದ ಹರಿವು' ('ಬೇಗ್ ವ್ರೆಮೇನಿ') ಪ್ರಕಟವಾಯಿತು. ರೈಟರ್ಸ್ ಯೂನಿಯನ್ ಅವಳನ್ನು ಸಂಸ್ಥೆಯ ಅಧ್ಯಕ್ಷೆಯನ್ನಾಗಲು ಒಪ್ಪಿಸಿತು. ಅದರ ಪ್ರಮುಖ ಸದಸ್ಯರಿಗೆ ಕೊಡುವಂತೆ ಅವಳಿಗೂ ಬೇಸಿಗೆಯಲ್ಲಿ ವಾಸಿಸಲು ಒಂದು 'ಹಟ್ಟಿ' ('ದಾಚಾ') ಕೊಟ್ಟಿತು, ಲೆನಿನ್‌ಗ್ರಾಡ್ ಬಳಿಯ ಕಮರಾವೊ ಹಳ್ಳಿಯಲ್ಲಿ. ಅದು ಗುಮಿಲ್ಯೋವ್‌ನಿಂದ ಬೇರೆಯಾದ ಮೇಲೆ ಅರ್ಧಶತಮಾನಾನಂತರ ತನ್ನದೇ ಎಂದುಕೊಳ್ಳಬಹುದಾದ ಮೊದಲ ಮನೆ ಅವಳ ಪಾಲಿಗೆ. ದಾಂತೆಯ ಏಳುನೂರನೆ ಜನ್ಮಶತಾಬ್ದಿಯಂದು ಇಟಲಿ ತನ್ನ ಅತ್ಯುಚ್ಚ ಎತ್ನಾ–ತೌರ್‌ಮಿನಾ ಪುರಸ್ಕಾರ ನೀಡಿತು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಡಾಕ್ಟರೇಟ್ ಪ್ರಶಸ್ತಿ ಪ್ರದಾನಮಾಡಿತು. ಆನಾ ಮತ್ತೊಮ್ಮೆ ಇಂಗ್ಲಂಡ್, ಇಟಲಿ ಪ್ರವಾಸ ಮಾಡಿಬಂದಳು.

ಆನಾ ಅಹ್ಮತೋವಾ ೧೯೬೬ರ ಮಾರ್ಚ್ ತಿಂಗಳು ಮಾಸ್ಕೊ ಬಳಿಯ ದೋಮೊದೆದೊವೊನಲ್ಲಿ ಎಪ್ಪತ್ತೇಳನೆಯ ವಯಸ್ಸಿನಲ್ಲಿ ನಿಧನಳಾದಳು. ಕಮರಾವೊದಲ್ಲಿಯೇ ಅವಳ ಶವಸಂಸ್ಕಾರವಾಯಿತು. ಲೆನಿನ್‌ಗ್ರಾಡ್‌ನ ಚರ್ಚಿನಲ್ಲಿ ನಡೆದ 'ರಿಕ್ವಿಯಂ ಮಾಸ್'ನಲ್ಲಿ ಅವಳ ಆತ್ಮಕ್ಕೆ ಶಾಂತಿಕೋರಿ ಗೌರವ ಸಲ್ಲಿಸಲು ಸೇರಿದ್ದ ಜನ ಐದುಸಾವಿರ, ಹೆಚ್ಚಾಗಿ ತರುಣರೇ.

ಆನಾ ತನ್ನ ಮೊದಲಿನ ಕವಿತೆಯೊಂದರಲ್ಲಿ ಭವಿಷ್ಯ ನುಡಿದಿದ್ದಳು–'ಸಾವಿನ ಮದ್ಯವನ್ನು ಎಲ್ಲರಿಗಿಂತ ಮೊದಲು ಹೀರಬಯಸಿದ್ದವಳು ನಾನೆಯೇ; ಎಂತಲೇ ಈ ಆಕಾಶದಡಿ ಬದುಕಿ ಉಳಿಯುವವಳೆಂದರೆ ನಾನೊಬ್ಬಳೇ' (ಕ. ೩೨). ಅವಳೆಂದಂತೆಯೇ ಆಗಿತ್ತು. ಮಗ ಲೆವ್ ಮತ್ತು ಒಬ್ಬಿಬ್ಬ ಗೆಳತಿಯರ ಹೊರತು ಎಲ್ಲರೂ – ಮೂವರು

ಗಂಡಂದಿರು, ಇತರೆಲ್ಲ ಸಂಬಂಧಿಗಳು, ಆಪ್ತರು, ಮಿತ್ರರು, ಮೆಚ್ಚಿನ ಜತೆಯ ಮೂವರು ಕವಿಗಳು : ಮ್ಯಾಂದಲ್‌ಷ್ಟಾಮ್, ತ್ಸ್ವೆತಯೇವಾ ಮತ್ತು ಪಾಸ್ತರ್‌ನಾಕ್ – ಎಂದೋ ತೀರಿಕೊಂಡಿದ್ದರು. ಅವಳೊಂದಿಗೆ ರಷ್ಯಸಾಹಿತ್ಯದ ಒಂದು ಸುವರ್ಣಯುಗ ಕೊನೆಗಂಡಿತ್ತು, ಒಂದು ಸಂಸ್ಕೃತಿ ಕಣ್ಮರೆಯಾಗಿತ್ತು. ಆದರೂ ಕೊಟ್ಟಮಾತಿನಂತೆ ನಾವು ಎಂದೆಂದಿಗೂ ಮರೆಯಲಾಗದ್ದನ್ನು ನಮ್ಮೊಂದಿಗೆ ಬಿಟ್ಟು ಹೋಗಿದ್ದಳು. ಆದೆಂದರೆ ಅವಳ 'ನೆರಳು', ಅವಳ ಕವಿತೆ (ಕ. ೧೦೦).

೨

ಜಗತ್ತಿನ ಯಾವದೇ ದೇಶದ ಯಾವದೇ ಕಾಲದ ಕವಿಯನ್ನಾಗಲಿ, ನಮಗೆ ಅಳೆಯಲಿರುವುದು ಎರಡೇ ಮಾನದಂಡಗಳು. ಒಂದು, ಅವನ ಕಾವ್ಯವಸ್ತು ಯಾವದು? ಎರಡು, ಆ ವಸ್ತು ಅವನ ಕೈಯಲ್ಲಿ ಭಾಷಾಮಾಧ್ಯಮದ ಮೂಲಕ ಹೇಗೆ ಅಭಿವ್ಯಕ್ತಿ ಪಡೆಯುತ್ತದೆ? ಮೂಲಪ್ರಶ್ನೆಗಳು ಸರಳವಾದರೂ ಅವುಗಳಿಂದೇಳುವ ಉಪಪ್ರಶ್ನೆಗಳು ಅನೇಕ ಹಾಗೂ ಜಟಿಲ – ಅವನು ಆರಿಸಿಕೊಂಡ ಕಾವ್ಯವಸ್ತು ನಮಗೆ, ಅರ್ಥಾತ್ ನಮ್ಮ ಜೀವನಕ್ಕೆ ಹೇಗೆ ಸಂಬದ್ಧ? ಅದು ಸಂಬದ್ಧವಾದಾಗಷ್ಟೆ ಅದು ನಮ್ಮನ್ನು ಮುಟ್ಟುವುದು, ತಟ್ಟುವುದು, ನಮ್ಮದಾಗುವುದು. ಮತ್ತೆ ವಿನ್ಯಾಸಕ್ರಮದಲ್ಲಿ ಅವನು ಯಾವ ಬಗೆಯ ರೂಪಕಾದಿಗಳನ್ನು ಹೇಗೆ ಬಳಸಿ ಇತರೆಲ್ಲ ಕವಿಗಳಿಗಿಂತ ಭಿನ್ನವಾಗಿ ನಿಲ್ಲುತ್ತಾನೆ, ಇತ್ಯಾದಿ.

ಆನಾಳ ಕಾವ್ಯವಸ್ತುಗಳನ್ನು ಕುರಿತು ಈಗಾಗಲೇ ಸಾಕಷ್ಟು ಹೇಳಿಯಾಗಿದೆ. ಅವಳಲ್ಲಿ ಕಾಲುಭಾಗ ಪ್ರೇಮ, ಹುಟ್ಟೂರು ಮುಂತಾಗಿ ಸ್ವಂತದ ವಿಷಯಗಳಾದರೆ ಇನ್ನುಳಿದ ಮುಕ್ಕಾಲು ನೂರಕ್ಕೆ ನೂರು ಸಾಮಾಜಿಕ, ಸಾರ್ವತ್ರಿಕ – ದೇಶಪ್ರೇಮ; ಯುದ್ಧ, ಕ್ರಾಂತಿ, ದಬ್ಬಾಳಿಕೆಗಳಿಂದ ಆಗುವ ಆಘಾತಗಳು; ಕವಿತೆಯ ಹುಟ್ಟು ಬೆಳವಣಿಗೆಗಳ ಗುಟ್ಟು; ಮುಪ್ಪು–ಸಾವು–ಕಾಲ, ಇತ್ಯಾದಿ. ಆನಾ ಕವಿತೆಗೆ ಕೈಹಚ್ಚಿದಾಗ ಅವಳ ಏಕೈಕ ವಿಷಯವಾಗಿದ್ದದ್ದು ಪ್ರೇಮ. ಅದು ಪ್ರಾಯಶಃ ಎಲ್ಲ ಕವಿಗೂ ಬದುಕಿನ ಒಂದಲ್ಲ ಒಂದು ಅವಧಿಯಲ್ಲಿ, ಒಂದಲ್ಲ ಒಂದು ರೂಪದಲ್ಲಿ ಬಿಡದೆ ಹಿಡಿಯುವ ಭೂತ. ಯುದ್ಧ ಮತ್ತು ಕ್ರಾಂತಿಪೂರ್ವ ಉಚ್ಚವರ್ಗೀಯ ರಷ್ಯದ ಸಮಾಜದಲ್ಲಿ ಕಾವ್ಯದಲ್ಲಿ ಪ್ರೇಮಕ್ಕೆ ಪ್ರಾಧಾನ್ಯವಿದ್ದದ್ದು ಆಶ್ಚರ್ಯವೇನಲ್ಲ. ಆದರೂ ಆನಾಳ ಪ್ರೇಮಗೀತೆಗಳ ಬಗೆಯೇ ಬೇರೆ. ಅವಳ ಅಚ್ಚಾಗಿರುವ ಕವಿತೆಗಳೆಲ್ಲವೂ ನಾಲ್ಕಾರರ ಹೊರತು ೧೯೧೦ರ ನಂತರದವು, ಮದುವೆಯಾದ ಹೊಸದರಲ್ಲಿಯೇ ಗಂಡ ಗುಮಿಲ್ಯೊವ್ ಅವಳ ಬಗ್ಗೆ ಉದಾಸೀನ ತೋರತೊಡಗಿದ ನಂತರ ಬರೆದವು. ಈ ನೋವು, ಬರ, ಏಕಾಕಿತನ, ಮೇಲೆ ಅವಳು ಬಾಳಿದ ಸ್ವಚ್ಛಂದ ಸಮಾಜದಲ್ಲಿನ ಎಳೆತ–ಸೆಳೆತಗಳು, ಒಲಿದವರನ್ನು ನಿರಾಕರಿಸಿ ಒಲಿಯದವರ ಹಿಂದೆಬೀಳುವ ಅವಳ ಸ್ವಭಾವ – ಇವು ಅವಳ ಪ್ರೇಮಗೀತೆಗಳನ್ನು ವಿಶಿಷ್ಟವನ್ನಾಗಿಸುತ್ತವೆ. ಅವು ತೋರಿಸುವುದು ಪ್ರೇಮದ ಇನ್ನೊಂದು ಮುಖವನ್ನು. ಅಲ್ಲಿ ಒಬ್ಬ ಅಕ್ಕಮಹಾದೇವಿ, ಮೀರಾ, ಆಂಡಾಳರಲ್ಲಿ ಕಾಣುವ ನಲ್ಲನ ಬಗೆಗಿನ ಕಾತರತೆ, ಉತ್ಕಟತೆ, ತೀವ್ರತೆಗಳ ಏಕತಾನವಿಲ್ಲ. ಎಲ್ಲೂ ಪ್ರೇಮದ ಆದರ್ಶೀಕರಣವಿಲ್ಲ,

ವೈಭವೀಕರಣವಿಲ್ಲ. ಬದಲು ವ್ಯಥೆಯ ಒಂದು ಒಳಎಳೆ ನಮ್ಮನ್ನು ಸೀಳುತ್ತದೆ. ಇದೇ ವ್ಯಥೆ ಪ್ರೇಮದಾಚೆಗಿನ ಬಹುಮಟ್ಟಿನ ಇತರ ಕವಿತೆಗಳಲ್ಲೂ ಹುದುಗಿದೆ. ಎಂತಲೇ, ಕವಯಿತ್ರಿ ತ್ಸ್ವೆತಯೇವಾ ಅವಳನ್ನು ತನ್ನೊಂದು ಕವಿತೆಯಲ್ಲಿ 'ಓ ಅಳಲವಾಣಿಯೇ' ಎಂದು ಸಂಬೋಧಿಸಿದ್ದು ಔಚಿತ್ಯಪೂರ್ಣ. ಪ್ರೇಮಗೀತೆಗಳಲ್ಲಿ ಆನಾ ತನ್ನದೇ 'ನಾಯಕೀಭೇದ'ವನ್ನು ಸೃಷ್ಟಿಸಿಕೊಳ್ಳುತ್ತಾಳೆ. ಒಂದೊಂದು ಗೀತೆಯೂ ಒಂದೊಂದು ಸನ್ನಿವೇಶದ ಚಿತ್ರಣ, ಒಂದೊಂದು ಮನಃಸ್ಥಿತಿಯ ಅಭಿವ್ಯಕ್ತಿ – ಪ್ರೇಮದಿಂದಾಗುವ ನೋವು, ನಷ್ಟ; ಅಸೂಯೆ, ತನ್ನದು ಇಲ್ಲವೇ ಗಂಡಿನದು; ಪ್ರೇಮದ ಮುರಿಗಡೆಯ ಯಾತನೆ ಆತಂಕಗಳ ಕ್ಷಣಗಳಲ್ಲಿ ಏಕಾಕಿತನದಲ್ಲಿಯೊ, ನಿಸರ್ಗದಲ್ಲಿಯೊ, ಕಾವ್ಯದಲ್ಲಿಯೊ ಆಧ್ಯಾತ್ಮಿಕ ಶಾಂತಿಯ ಅರಸಿಕೆ, ಇತ್ಯಾದಿ. ಕವಿತೆಗಳು ಕಥನಶೀಲತೆ, ನಾಟ್ಯಶೀಲತೆಗಳಿಂದ ಕೂಡಿದ್ದು ಒಂದೊಂದು ಪ್ರೇಮಗಾಥವಿದ್ದಂತೆ. ಕೆಲವನ್ನು ಕತೆ, ಕಿರುಕಾದಂಬರಿಗಳನ್ನಾಗಿ ವಿಸ್ತರಿಸುವುದೂ ಸಾಧ್ಯ. ಉದಾಹರಣೆಗೆ, ಕೇವಲ ಹನ್ನೆರಡು ಸಾಲುಗಳ 'ಬೂದಲಗಣ್ಣಿನ ದೊರೆ'ಯನ್ನು ನೋಡಬಹುದು (ಕ. ೨). ಗಂಡ ಬಂದು ಹೆಂಡತಿಗೆ ಬೂದಲಗಣ್ಣಿನ ದೊರೆ ಸತ್ತ ಸುದ್ದಿ ತಿಳಿಸಿ, ಅವನ ಹೆಣ ಎಲ್ಲೋ ಸಿಕ್ಕಿದುದಾಗಿ ಹೇಳಿ ಹೊರಟು ಹೋಗುತ್ತಾನೆ. ಹೆಂಡತಿ ಮಲಗಿದ ಮಗಳನ್ನೆಬ್ಬಿಸಿ ಅವಳ ಬೂದಲಗಣ್ಣುಗಳನ್ನೇ ದೃಷ್ಟಿಸಿ ನೋಡುವಾಗ ಕವಿತೆ ಕತೆಯಾಗಿ ಬಿಚ್ಚಿಕೊಳ್ಳುತ್ತದೆ. ಅದು ಹೇಳದೆ ಬಿಟ್ಟ ಹೆಣ್ಣಿನ ಕಳ್ಳಪ್ರೇಮ, ಆ ಸತ್ತ ದೊರೆ ಅವಳ ನಲ್ಲ, ಅಥವಾ ನಲ್ಲನೆಂದೇ ಅವನು ದೊರೆ, ಅವರ ಪ್ರೇಮವನ್ನು ಸಹಿಸಲಾರದ ಗಂಡನೇ ದೊರೆಯನ್ನು ಕೊಲ್ಲಿಸಿದ್ದಾನೆ ಮುಂತಾದ ಘಟನಾವಳಿಗಳು ನಮ್ಮ ಕಲ್ಪನೆಯ ಮುಂದೆ ಹಾದುಹೋಗುತ್ತವೆ.

ಪ್ರೇಮ ಆನಾಳ ಕವಿತೆಯ ಮೇಲುದನಿಯಾಗಿ ಬಹಳ ದಿನ ಉಳಿಯಲಿಲ್ಲ. ಅರ್ಧಶತಮಾನಕ್ಕೂ ಮೀರಿದ ಕವಿಜೀವನದಲ್ಲಿ ಅದು ಪ್ರಬಲವಾಗಿದ್ದದ್ದು ಮೊದಲ ಹತ್ತುವರ್ಷ, ಮತ್ತೆ ಕೊನೆಗಾಲದಲ್ಲಿ ಬೇರೊಂದು ದಾರುಣ ರೂಪದಲ್ಲಿ ಒಂದೆರಡು ವರ್ಷ ಮಾತ್ರ. ಆದರೆ ರಷ್ಯದ ಒಳಗೂ ಹೊರಗೂ ವಿಮರ್ಶಕರು ಅಂದೂ ಇಂದೂ ಅವಳನ್ನೊಬ್ಬ ಬರಿಯ ಪ್ರೇಮಗೀತೆಗಳ ಕವಿಯೆಂದಷ್ಟೇ ಕಂಡದ್ದು ದುರದೃಷ್ಟ. ಅದು ಸ್ವತಃ ಆನಾಳಿಗೂ ತುಂಬ ನೋವನ್ನುಂಟುಮಾಡಿದ ವಿಷಯ. ಮೊದಲ ಯುದ್ಧ, ರಷ್ಯದ ಕ್ರಾಂತಿ, ದೇಶದ ಆಂತರಿಕ ಉತ್ಪಾತ ಸ್ಥಿತಿ ಅವಳ ಬದುಕಿಗೆ ಹೇಗೋ ಹಾಗೆಯೇ ಕವಿತೆಯ ವಿಷಯಕ್ಕೂ ಹೊಸ ತಿರುವು ಕೊಟ್ಟವು. ಏಕೆಂದರೆ ಅವಳು ಅವಕ್ಕೆ ನೇರವಾಗಿ ಬಲಿಯಾಗಿದ್ದಳು. ಹೀಗಾಗಿ ಅವಳ ಬಹುಮಟ್ಟಿನ ಕವಿತೆಗಳು ಸಾಂದರ್ಭಿಕ. ತನ್ನ ಬದುಕು, ಇಲ್ಲವೇ ಕಾಲದ ಒಂದು ಗೊತ್ತಾದ ಹೊತ್ತು, ಗೊತ್ತಾದ ಸನ್ನಿವೇಶಗಳ ತೀವ್ರತೆಗೆ ಮಾರ್ನುಡಿಯಾಗಿ ಬರೆದಂತಹವು. ಅನುಕ್ರಮವಾಗಿ ನೋಡಿದಾಗ ಕವಿತೆಗಳು ಅವಳ ಜೀವನಚರಿತ್ರೆಯೂ ಹೌದು, ದೇಶದ ಇತಿಹಾಸವೂ ಹೌದು. ಆನಾ ಇದನ್ನು ಮುಂದಾಗಿ ಬಲ್ಲಳು. ಎಂತಲೇ ಒಂದೊಂದು ಕವಿತೆಯ ಕೆಳಗೂ ಅದನ್ನು ಬರೆದ ತಾರೀಕಿನ, ಸ್ಥಳದ, ಕೊನೆಗೆ ಬೇಸಿಗೆ, ಚಳಿಗಾಲ ಮುಂತಾಗಿ ಋತುವಿನ ಅಂಕಿತ ಹಾಕಿದ್ದಾಳೆ. ಇನ್ನೂ ಒಂದು ವಿಶೇಷವೆಂದರೆ ಕವಿತೆಗಳಲ್ಲಿ ಅನೇಕವು 'ಮತ್ತು' (ರಷ್ಯಭಾಷೆಯಲ್ಲಿ 'ಈ') ಎಂಬ ಸಂಬಂಧಸೂಚಕ ಕೊಂಡಿಪದದಿಂದ ಷುರುವಾಗುತ್ತವೆ (ಕನ್ನಡದ ಜಾಯಮಾನಕ್ಕೆ

ಹೊಂದುವುದಿಲ್ಲವೆಂದು ಅನುವಾದದಲ್ಲಿ ಇದನ್ನು ಪ್ರಯತ್ನಿಸಿಲ್ಲ), ಒಂದೊಂದು ಕವಿತೆಯೂ ಬದುಕಿನ ದಿನಚರಿಯ ಹಾಳೆಯೊ, ಇತಿಹಾಸದ ಪುಟವೊ, ಮಹಾಕಾವ್ಯದ ಪ್ರಕರಣವೊ ಎಂಬಂತೆ. ಹೀಗೆ ದೇಶದ ಇತಿಹಾಸ ಒಬ್ಬ ಕವಿಯ ಪಾಲಿಗೆ ಜೀವನ ಚರಿತ್ರೆಯಾದದ್ದು, ಎರಡೂ ಕೂಡಿ ಆ ಕವಿಯ ಸಮಗ್ರಕಾವ್ಯವಾದದ್ದು ಜಗತ್ತಿನಲ್ಲಿಯೇ ಇನ್ನೊಂದು ನಿದರ್ಶನವಿಲ್ಲವೇನೊ!

ಅನಾಳ ಕವಿತೆಗಳಲ್ಲಿ ಸಾಮಾಜಿಕ ಘಟನೆಗಳು ಯಾವದೂ ಹೊರಗಿನ ಸಂಗತಿಗಳಾಗಿ, ಕೇವಲ ವಸ್ತುನಿಷ್ಠವಾಗಿ ಉಳಿದುಬಿಡುವುದಿಲ್ಲ. ಬಾಹ್ಯಸಂಗತಿಗಳನ್ನು ಅಂತರ್ಗೊಳಿಸಿಕೊಂಡು ವ್ಯಕ್ತಿನಿಷ್ಠವಾಗಿ ಬರೆಯುವುದು ಅವಳ ಪ್ರತಿಭೆ. ಅವಳಿಗೆ ಪ್ಯಾರಿಸ್ ನಗರದ ಪತನ ತನ್ನ ಲೆನಿನ್‌ಗ್ರಾಡ್ ಪಟ್ಟಣದ ಪತನ, ಅಲ್ಲಿ ತೇಲುವ ಹೆಣ ತನ್ನ ಮನೆ ಮುಂದಿನ ನೀವಾ ನದಿಯಲ್ಲಿ ತೇಲಿದ ತನ್ನದೇ ಹೆಣ (ಕ. ೫೭). ಲೆನಿನ್‌ಗ್ರಾಡ್‌ನ ಮುತ್ತಿಗೆಯಲ್ಲಿ ನರಳಿ, ನೊಂದ ಪಾತ್ರಗಳೆಲ್ಲವೂ ಅವಳೇ.

ಅವಳಲ್ಲಿ ನಮಗೆ ಮೊದಲು ಎದ್ದುಕಾಣುವ ಮಹತ್ವದ ಗುಣಗಳೆಂದರೆ ಸ್ವಾನುಭವ–ಸಂಪನ್ನತೆ ಮತ್ತು ಪ್ರಾಮಾಣಿಕತೆ. ಆಧುನಿಕ ಕಾವ್ಯಮೀಮಾಂಸೆ 'ಫೆಲ್ಟ್ ಎಕ್ಸ್‌ಪೀರಿಯನ್ಸ್' ಬಗ್ಗೆ ಮಾತಾಡಲು ಷುರುಮಾಡುವ ಎಂದೋ ಮೊದಲೇ ಅದು ಅವಳಿಗೆ ರಕ್ತಗತವಾಗಿತ್ತು. ಕಂಡು ಅನುಭವಿಸಿದಷ್ಟನ್ನೇ ಅವಳು ಬರೆದಳು. ಅದರಲ್ಲಿ ಸುಳ್ಳಿಲ್ಲ, ಕಪಟವಿಲ್ಲ. ಎಂತಲೇ 'ಮುಂದೊಂದು ದಿನ ಜನ ನನ್ನ ಮಾತನ್ನು ನಂಬುತ್ತಾರೆ' ಎಂಬ ಧೈರ್ಯ ಅವಳಿಗಿತ್ತು. (ಕ ೭೩). ಕವಿತೆ ಮೊದಲು ಸಾಧಿಸಬೇಕಾದದ್ದು ಈ ಗುಣವನ್ನು. ಅದು ಕಲ್ಪನೆಯ ಕುಸುಮವಾಗಬಾರದು, ಸತ್ಯದ ಕಟುವಾಣಿಯಾಗಬೇಕು.

ರಷ್ಯಭಾಷೆಯಲ್ಲಿ ಕವಿತೆಗೆ ಸಮಾನಪದ 'ಸ್ತೀಖ್'. ಅದಕ್ಕೆ 'ಕವಿತೆ'ಯಲ್ಲದೆ 'ಭಾವನೆ' ಅಥವಾ 'ಮನಃಸ್ಥಿತಿ' ಎಂಬ ಬೇರೊಂದು ಅರ್ಥವೂ ಇದೆ. ಅನಾಳ ಕವಿತೆಗಳಲ್ಲಿ ಈ ಎರಡೂ ಅರ್ಥಗಳು ಮಿಳನವಾಗಿರುವುದು ಕಾಣುತ್ತದೆ. ಮೂಲದಲ್ಲಿ ಭಾವನೆಯನ್ನು ಒಳಗೊಳ್ಳದ, ಕೇವಲ ಬೌದ್ಧಿಕವೆಂಬ ಕವಿತೆಯೇ ಅವಳಲ್ಲಿಲ್ಲ. ಹೀಗೆ ಬಂದು ಹಾಗೆ ಹೋಗುವ ಕ್ಷಣಮಾತ್ರದ ಸೂಕ್ಷ್ಮಭಾವನೆಗಳನ್ನು ಸಹ ಅವಳು ಸಮರ್ಥವಾಗಿ ಕವಿತೆಯಲ್ಲಿ ಹಿಡಿದಿಡಬಲ್ಲಳು. ಅದೂ ಕುಂಚದ ಒಂದೆರಡು ಪಟ್ಟೆಗಳಿಂದಲೇ – ಚಿತ್ರ ಬಿಡಿಸಿದಂತೆ. ಕವಿತೆಯ ವಸ್ತು ಯಾವದೇ ಇರಲಿ, ಅಲ್ಲಿ ನಮಗೆ ಕಾಣುವುದು ಹೆಣ್ಣುಹೃದಯದ ಭಾವನೆ, ಹೆಣ್ಣುಹೃದಯದ ಚೀತ್ಕಾರ.

ಕಾವ್ಯದ ವಸ್ತು ಬೃಹತ್ತಾಗಿರಬೇಕೆಂಬ ನಿಯಮವಿಲ್ಲ. ತೀರಾ ಅಲ್ಪವಾದರೂ ಸರಿಯೇ, ಅದರಲ್ಲಿ ಜೀವಾಳವಿದ್ದರಾಯಿತು. ಕವಿತೆಗಳ ವಿಸ್ತಾರ ಸಹ ಅಷ್ಟೇ. ವಸ್ತುವಿನಷ್ಟೇ ಕಿರಿದು. ಹೆಚ್ಚಿನವು ನಾಲ್ಕುನಾಲ್ಕು ಸಾಲುಗಳ ಒಂದು, ಎರಡು, ಮೂರು ಚರಣಗಳನ್ನುಳ್ಳವು. ಬಹುಮಟ್ಟಿನ ರಷ್ಯಭಾಷೆಯ ಕವಿತೆಗಳಂತೆ ಛಂದೋಬದ್ಧ, ಪ್ರಾಸಬದ್ಧ (ಅಲ್ಲಿ ಮುಕ್ತಛಂದದ ಕವಿತೆ ಇಂದಿಗೂ ನೂರಕ್ಕೊಂದು). ಕವಿತೆಯದು ಬುದ್ಧಿಯ ಭಾಷೆಯಲ್ಲ, ಹೃದಯದ ಭಾಷೆ. ಮಾತು ಮಿತ, ಸರಳ. ಚಲನೆಯಲ್ಲಿಲ್ಲದ ಶಬ್ದಕೋಶದ ಪದಗಳು ಅವಳ ಕೆಲಸಕ್ಕೊದಗುವುದಿಲ್ಲ. ಅಷ್ಟೇ, ಪದಗಳನ್ನು ಸಂದರ್ಭಾನುಸಾರ ಬಳಸುವಲ್ಲಿಯೂ ಅವಕ್ಕೆ ಭಾವವಿಕಸನಶಕ್ತಿ, ಸ್ಪಂದನ ಸಾಮರ್ಥ್ಯ

ಗಳನ್ನೆರೆದು ಅವನ್ನು ಅಭಿವ್ಯಕ್ತಗೊಳಿಸುತ್ತಾಳೆ. ಅವಳ ಮಾತಿನ ಸರಳತೆಗೆ ಯಾವೊಂದು ಕವಿತೆ ಸಹ ನಿದರ್ಶನವಾಗಬಲ್ಲದಾದರೂ ವಿಶೇಷವಾಗಿ, ೧೯೧೭ರಷ್ಟು ಹಿಂದೆಯೇ ಬರೆದ ಒಂದನ್ನು ಉದ್ಧರಿಸುವುದುಂಟು: ''ಇಪ್ಪತ್ತೊಂದನೆ ತಾರೀಕು. ನಡುರಾತ್ರಿ. ಸೋಮವಾರ / ನಗರದ ಮೇಲ್ಕೈ ಮಂಜಿನಿಂದ ಕವಿದಿದೆ''. ರಷ್ಯಭಾಷೆಯ ಸೂಕ್ಷ್ಮತೆಗಳನ್ನು ಹಿಡಿಯ ಬಲ್ಲವರ ಪ್ರಕಾರ, ರಷ್ಯದ ಜಾನಪದ ಕವಿತೆ, ಗೀತೆ ಅವಳಿಗೆ ಸ್ಫೂರ್ತಿ. ಅವಳ ಅನೇಕ ಕವಿತೆಗಳಲ್ಲಿರುವುದು ಅದೇ ಬಗೆಯ ಲಯ, ರಿಂಗಣ.

ಕವಿತೆಗಳಲ್ಲಿ ಅವನಶ್ಯಕವಾಗಿ ಪ್ರತಿಮೆಗಳ ಗೊಂದಲವಿಲ್ಲ. ಬಳಸುವ ಪ್ರತಿಮೆಗಳು ಅರ್ಥಭಾವಗಳಿಗೆ ಸಂವಾಹಕ. ಎಲ್ಲೂ ಸಂಕೀರ್ಣತೆಯಿಲ್ಲ. ಶೈಲಿಯ ಕಣ್ಣುಕಟ್ಟಿಲ್ಲ, ಕಸರತ್ತಿಲ್ಲ. ಪರಿಣಾಮಕ್ಕಾಗಿ ಹೆಣಗುವ, ಭೂಷಣಕ್ಕಾಗಿ ಅಂಚುಕಟ್ಟುವ ಪ್ರಯಾಸವಿಲ್ಲ. ಅವಳೇ ಹೇಳುವಂತೆ 'ಕವಿತೆಯಲ್ಲಿ ಎಲ್ಲ ಅನಾಯಾಸವಾಗಿ ಬರಬೇಕು' (ಕ. ೫೫). ಮಿಂಚಿನ ಹೊಳಹು ಹೊಡೆಸಿ, ಅದರ ಬೆಳಕಿನಲ್ಲಿ ಓದುಗರ ಕಲ್ಪನೆಯನ್ನು ಅರಳಿಸುವ ಧ್ವನಿಶೀಲತೆಯಿದೆ. ಅದಕ್ಕೆ ಇಂಬುಗೊಡುವುದು ಅವಳಿಗೆ ದೈವದತ್ತವಾಗಿ ಬಂದ ಗೀತಧ್ವನಿ. 'ರಿಕ್ವಿಯಂ'ನ ಕವಿತೆಗಳಲ್ಲಿಯಂತೆ ಎಂತಹ ನಿಷ್ಠುರ, ಕಠೋರ ವಿಷಯವನ್ನು ಕುರಿತು ಬರೆಯುವಾಗಲೂ ಅದು ಅವಳ ಕೈಬಿಡುವುದಿಲ್ಲ. ಇಡೀ ಕವಿತೆಗೆ ಹರಡಿಕೊಂಡು ನಮ್ಮ ಕಿವಿಯಲ್ಲಿ ದೀರ್ಘಕಾಲ ಗುನಗುನಿಸುತ್ತಿರುತ್ತದೆ. ಮೇಲೆ, ಮನಸ್ಸಿನಲ್ಲಿ ತಳವೂರಿ, ಉದ್ಧರಣೋಕ್ತಿಗಳಾಗಬಲ್ಲ ನುಡಿಗಟ್ಟಿನಂತಹ ಮಾತು. ಒಮ್ಮೊಮ್ಮೆ ಅದರಲ್ಲಿಯೂ ಹೆಚ್ಚಾಗಿ ಕೊನೆಗಾಲದ ಕವಿತೆಗಳಲ್ಲಿ ಅಪೂರ್ಣತೆಯ ಭಾವನೆ ಬಂದರೂ ಸಾಧಾರಣವಾಗಿ ಕಟ್ಟುನಿಟ್ಟಾದ ಅಚ್ಚುಕಟ್ಟಿನ ಶಿಲ್ಪಕತೆ. ಇವೆಲ್ಲವೂ ಸಮರಸವಾಗಿ ಬೆರೆತ ಒಟ್ಟಂದ. ಒಬ್ಬ ಒಳ್ಳೆಯ ಕವಿಗೆ, ಒಟ್ಟಾಗಿ ಕವಿತೆಗೆ ಸಾರ್ಥಕತೆ ಕೊಡಲು ಮತ್ತೇನು ಬೇಕು!

ಅನಾಳಿಗೆ ಕವಿತೆ ಜೀವನದ ಉಸಿರಾಗಿತ್ತು. 'ಅದರ ಮುಂದೆ ಕೀರ್ತಿ, ಯೌವನ, ಸ್ವಾತಂತ್ರ್ಯಗಳು ಯಾವ ಲೆಕ್ಕ?' (ಕ. ೪೩). ನಾಲ್ಕೂ ಕಡೆಯಿಂದ ದುಃಖಕಷ್ಟಗಳು ದಾಳಿಯಿಟ್ಟಾಗ ಅವುಗಳಿಂದ ಬದುಕಿ ಉಳಿಯಲು ಅವಳಿಗಿದ್ದ ರಕ್ಷಣೆ ಅದೊಂದೇ. ಒಮ್ಮೊಮ್ಮೆ ಅದರ ಸೀಮಿತ ಶಕ್ತಿಯಿಂದ ಬೇಸರ ಬಂದರೂ ಅದು 'ಉಲ್ಕಾಪಾತದಂತೆ ಬಂದು ದುರ್ಗಮ ದಾರಿಗಳಲ್ಲಿ ಕೈಹಿಡಿದು ನಡಸಿತ್ತು' (ಕ. ೯೫). ಅನಾಳ ಕವಿತೆಯ ಧ್ವನಿ ಇನ್ನು ತಡೆಯದಾದಾಗ ಮನಸ್ಸಿನ ಒಂದು ಭಾವನೆಯನ್ನೊ, ವೇದನೆಯನ್ನೊ ಯಾರೋ ಆಪ್ತರಲ್ಲಿ ಕೆಲವೇ ಮಾತುಗಳಲ್ಲಿ ತೋಡಿಕೊಂಡಂತೆ. ಬಹುಪಾಲು ಕವಿಗಳಂತೆ ಎಂದೂ ಅವಳು ಪ್ರಾರೂಪ ಹಾಕಿಕೊಂಡು, ಹಗಲೂರಾತ್ರಿ ತಿದ್ದುತ್ತ ತೀಡುತ್ತ, ಕರಡಿಂದ ಕರಡಿಗೆ ಸುಧಾರಿಸುತ್ತ ಹೋದವಳಲ್ಲ. ಗರ್ಭಧಾರಣೆಯಿಂದ ಜನ್ಮಧಾರಣೆಯವರೆಗೆ ಕವಿತೆಯ ಬೆಳವಣಿಗೆಯ ಎಲ್ಲ ಪ್ರಕ್ರಿಯೆಗಳೂ ಮನೋಗರ್ಭದಲ್ಲಿಯೇ ನಡೆದು ಕೊನೆಗೊಮ್ಮೆ ಅಂತಿಮರೂಪದಲ್ಲಿ ಕಾಗದಕ್ಕಿಳಿಯುತ್ತಿತ್ತು. ಅವಳೊಂದಿಗೆ ದಶಕಗಳ ಕಾಲ ಜತೆ ಬಾಳಿದ ಮ್ಯಾಂಡಲ್‌ಷ್ಟಾಮ್‌ನ ಪತ್ನಿ ನಜ್ದೆಷ್ದಾ ಇದನ್ನು ಒಂದು ಕಡೆ ವರ್ಣಿಸಿದ್ದಾಳೆ. ಆ ನಡುವೆ ಅವಳ ತುಟಿಯಷ್ಟೇ ಅದುರುತ್ತಿರುವುದು ಕಾಣುತ್ತಿರುತ್ತಿತ್ತಂತೆ.

ಆನಾ ಆಹ್ಮತೋವಾಳಂತಹ ಒಬ್ಬ ಮಹಾಕವಿಯ ಕಾವ್ಯಾಧ್ಯಯನ ಮೊದಲು ಭಾವನೆಯ ಒಂದು ಮಹತ್ವದ ಚಟುವಟಿಕೆ. ಆದರೆ ಅದು ಅಷ್ಟಕ್ಕೇ ಸೀಮಿತವಾಗುವುದಿಲ್ಲ. ನಾವು ಬಯಸಿದರೆ ಅದು ಒಂದು ಶಿಕ್ಷಣ ಸಹ. ಅನೇಕ ಲೋಕಗಳಿಗೆ ಬಾಗಿಲು ತೆರೆಯಬಲ್ಲದು ಅದು. ಸಂದರ್ಭ ತಿಳಿದು ಆನಾಳ ಕವಿತೆಯನ್ನು ನಾವು ಓದಿದಾಗ ಅದು ನಮಗೆ ಈ ಶತಮಾನದ ರಷ್ಯದ, ದಬ್ಬಾಳಿಕೆಯ ತುತ್ತತುದಿ ಹತ್ತಿ ಅಧಃಪತನ ಕಂಡ ಒಂದು ವ್ಯವಸ್ಥೆಯ, ಅದರಿಂದುಂಟಾದ ಸಾಮಾಜಿಕ–ರಾಜಕೀಯ ಸ್ಥಿತಿಗಳ, ಅಲ್ಲಿನ ಧೀರೋದಾತ್ತ ಜನತೆಯ, ಅಷ್ಟೇ ಆನಾಳಂತಹ ಒಂದು ಸೂಕ್ಷ್ಮ ಚೇತನದ, ಅವುಗಳೆಲ್ಲದರ ಮೂಲಕ ಮಾನವ ಪ್ರಪಂಚದ ಆಳವಾದ ಪರಿಚಯ ಮಾಡಿಕೊಡುತ್ತದೆ. ಈ ದೃಷ್ಟಿಯಿಂದ ನೋಡುವಾಗ ಆನಾ ಆಹ್ಮತೋವಾ ಒಬ್ಬ ಅನನ್ಯಕವಿ.

೨

ಆನಾ ಆಹ್ಮತೋವಾಳ ಕವಿತೆಗಳನ್ನು ನಾನು ಮೊದಲು ಒಟ್ಟಾಗಿ ಓದಿದ್ದು ೧೯೬೯ರಲ್ಲಿ, ಅದೇ ವರ್ಷ ಪೆಂಗ್ವಿನ್‌ನಿಂದ ಪ್ರಕಟವಾಗಿ ಬಂದಿದ್ದ ರಿಚರ್ಡ್ ಮೆಕ್‌ಕೇನರ ಅನುವಾದದಲ್ಲಿ. ಮೊದಲ ಓದಿಗೇ ಅವು ನನ್ನ ಮೇಲೆ ತುಂಬ ಪ್ರಭಾವ ಬೀರಿದವು. ಓದಿದಷ್ಟೂ ಆನಾಳ ಕಾವ್ಯ ನನ್ನ ಪಾಲಿಗೆ ಒಂದು ಹುಚ್ಚೇ ಆಯಿತು. ಒಬ್ಬ ಒಳ್ಳೆಯ ಕವಿ ಕಾವ್ಯಪ್ರೇಮಿಗಳ ಮೇಲೆ ಮಾಡುವ ಪರಿಣಾಮ ಅದು. ನಮ್ಮ ಕಾಲದ ಒಬ್ಬ ಕವಿ ಕವಿತೆಯಲ್ಲಿ ಸಾಧಿಸಬಯಸುವ ಗುಣಗಳಾದ ದೇಶಕಾಲಗಳೊಂದಿಗಿನ ಸಂಬದ್ಧತೆ, ಸರಳ ಹಾಗೂ ನೇರವಾದ ಮಾತಿನ ಮೂಲಕ ಅಭಿವ್ಯಕ್ತಿ, ಮಾತಿನಲ್ಲಿ ಮಿತಿ, ಧ್ವನಿಪೂರ್ಣತೆ, ಅರ್ಥದ ಖಚಿತತೆ, ಒಟ್ಟಿನ ಶಿಲ್ಪಕತೆ ಇತ್ಯಾದಿಗಳೆಲ್ಲವೂ ಅವಳ ಕವಿತೆಯಲ್ಲಿದ್ದವು. ಇವು ಅನುವಾದವಾಗಿ ಕನ್ನಡಿಗರ ಸ್ವತ್ತಾಗಬಾರದೇ ಎಂದು ಅನಿಸಿತು. ಆಗ ನಾನು ನೌಕರಿಯಲ್ಲಿದ್ದುದರಿಂದ ಅದಕ್ಕೆ ಬೇಕಾದ ಮನಃಶಾಂತಿ, ಬಿಡುವು ದುರ್ಲಭವಾಗಿತ್ತು. ಕಳೆದ ವರ್ಷ ಸಂಯೋಗದಿಂದ ವಿಶ್ರಾಂತನೂ ಆಗಿದ್ದು ಆನಾಳ ಜನ್ಮಶತಾಬ್ದಿಯೂ ಬಂದದ್ದು ಅನುವಾದಕ್ಕೆ ಕಾಲ ಪಕ್ವವಾಯಿತು. ಜತೆಗೆ ಮಿತ್ರ ಕೆ. ವಿ. ಸುಬ್ಬಣ್ಣ ಅಕ್ಷರ ಪ್ರಕಾಶನದ 'ಕವಿಸಂಧಾನ' ಮಾಲೆ ಪ್ರಾರಂಭಿಸಿದ್ದುದು ಮತ್ತೊಂದು ಪ್ರೇರಣೆ.

ಸುಭಾಷರ ಕವಿತೆಗಳ ನಂತರ ಆನಾಳ ಅನುವಾದಕಾರ್ಯವನ್ನು ಕೈಗೆತ್ತಿಕೊಂಡೆ. ಇಂಗ್ಲಿಷ್ ಅನುವಾದಗಳಿಗೆ ಕೊರತೆಯಿರಲಿಲ್ಲ. ಜತೆಗೆ ಒಂದು ರಷ್ಯದ ದ್ವಿ–ಭಾಷಿ ಕಾವ್ಯಸಂಗ್ರಹವೂ ಇದ್ದು ಅದರಲ್ಲಿ ಆನಾಳ ಇಪ್ಪತ್ತು ಕವಿತೆಗಳು ಮೂಲಪಾಠದ ಸಮೇತ ಇಂಗ್ಲಿಷ್ ಅನುವಾದದಲ್ಲಿ ದೊರೆತವು. ಮೂಲದ ನಡೆ, ಧ್ವನಿಗಳನ್ನು ತಿಳಿಯುವ ಕುತೂಹಲವಾಯಿತು. ಹತ್ತಿರದಲ್ಲೇ ರಷ್ಯದಲ್ಲಿ ಐದುವರ್ಷವಿದ್ದು ಪತ್ರಿಕೋದ್ಯಮದಲ್ಲಿ ಪದವಿ ಪಡೆದು ಬಂದ ನನ್ನೊಬ್ಬ ಗೆಳೆಯರ ಮಗಳು ಅನಾಮಿಕ ಆಚಾರ್ಯ ಇದ್ದಳು. ವಾರಕ್ಕೊಮ್ಮೆ ಅವಳ ಜತೆ ಕೂತು ಕೆಲವೊಂದು ಮೂಲಕವಿತೆಗಳ ಪದಶಃ ವಾಕ್ಯಶಃ ಅರ್ಥ ಗುರುತು ಹಾಕಿಕೊಂಡೆ. ಹೋಲಿಸಿ ನೋಡುವಾಗ ಇಂಗ್ಲಿಷ್ ಅನುವಾದದಲ್ಲಿದ್ದುದ್ದು

ಮೂಲದ ಎರಡುಪಟ್ಟು ! ಅನುವಾದಕರು ತಾವೇ ಕಲ್ಪಿಸಿ, ಸೇರಿಸಿ ಬೆಳಸಿದ್ದು ! ಡಿ. ಎಂ. ಥಾಮಸ್, ಕ್ಯೂನಿಟ್ಸ್ ಮುಂತಾದವರ ಇತರ ಅನುವಾದಗಳೊಂದಿಗೆ ಹೋಲಿಸಿ ನೋಡುವಾಗ ಗೊಂದಲ ಇಮ್ಮಡಿಸಿತು. ಒಬ್ಬೊಬ್ಬರೂ ಒಂದೊಂದು ಬಗೆಯ ಸ್ವಾತಂತ್ರ್ಯವಹಿಸಿ ಅನುವಾದದ ಹೆಸರಿನಲ್ಲಿ ತಮ್ಮದೇ ಕವಿತೆ 'ಕಟ್ಟಿದ್ದರು'. ಇದರ ಬಗ್ಗೆ ವಿಸ್ತೃತವಾಗಿ ಬರೆಯಲು ಸ್ಥಳಾವಕಾಶವಿಲ್ಲದ ಕಾರಣ ಒಂದೆರಡು ಸಣ್ಣ ಉದಾಹರಣೆ ಕೊಟ್ಟು ತೃಪ್ತನಾಗುತ್ತೇನೆ: ಕ. ೨೬ ರಲ್ಲಿ 'ಕಲಾವಿದ ಕಣ್ಣನ್ನು ಕಳೆದುಕೊಂಡಂತೆ' ಎಂಬ ಮೂಲದ ಸರಳ ವಾಕ್ಯ ಡಿ. ಎಂ. ಥಾಮಸ್‌ರ ಅನುವಾದದಲ್ಲಿ 'ಫ್ರಾ ಏಂಜೆಲಿಕೊನಿಗೆ ಕುರುಡು ಬಡಿದಿತ್ತು' ಎಂದಾಗಿದೆ! ಅಮೆರಿಕದ ವಿಖ್ಯಾತಕವಿ ಸ್ಟ್ಯಾನ್ಲಿ ಕ್ಯೂನಿಟ್ಸ್‌ರ ಅನುವಾದದಲ್ಲಿ 'ರಿಕ್ವಿಯಂ' ತಲೆಕಟ್ಟಿನ ಮೊದಲ ಸಾಲು '(ನಾನಾಗ ಇದ್ದದ್ದು) ಪರಕೀಯ ಆಕಾಶಗುಮ್ಮಟಗಳ ಕೆಳಗಲ್ಲ' ಎಂಬುದು 'ಯಾವ ವಿದೇಶೀ ಆಕಾಶವೂ ನನ್ನನ್ನು ರಕ್ಷಿಸಲಿಲ್ಲ' ಎಂದಾಗಿ, ಅಂತಹ ಆಶ್ರಯ ಪಡೆಯುವುದು ಅನಾಳಿಗೆ ಹೇಸಿಗೆಯ ವಿಷಯ ಎಂಬ ಅರ್ಥ, ಭಾವನೆ ತಿರಿಚಿ, 'ಆಶ್ರಯ ಸಿಕ್ಕಿದ್ದರೆ ಅನಾ ಅದನ್ನು ಪಡೆಯಲು ಸಿದ್ಧಳಿದ್ದಳು' ಎಂದು ತೋರಿಸುತ್ತದೆ! ಇಂತಹ ವಿಕೃತಿಗಳಿಗೆ ಮೆಕ್‌ಕೇನರ ಅನುವಾದವೊಂದು ಅಪವಾದ.

ಇವುಗಳಿಂದ, ಇಂಗ್ಲಿಷಿನಿಂದ ಮರುಅನುವಾದ ಮಾಡಿ ಪ್ರಯೋಜನವಿಲ್ಲ ವೆಂಬುದು ಖಚಿತವಾಯಿತು. ಮಾಡಿದರೆ ನೇರವಾಗಿ ಮೂಲದಿಂದಲೇ ಮಾಡಬೇಕು. ಆದರೆ ಭಾಷೆ ಬಾರದೆ ಬೇರೆಯವರ ಕೈಕಾಯುವುದೆಂದರೆ ಒಂದು ಕವಿತೆ ಮುಗಿಸಲು ವಾರಕ್ಕೊಮ್ಮೆ ಎರಡು ಮೂರು ಗಂಟೆ ಕೂತರೂ ತಿಂಗಳಕಾಲ ಹಿಡಿಯುತ್ತದೆ. ಅವರಿಗೆ ಅವರದ್ದೇ ಕೆಲಸ, ಸಮಯಾಭಾವ, ನನ್ನ ತುರ್ತಿಲ್ಲ. ಅಂದಿನಿಂದ ಹಿಂದೆಂದೋ ಪ್ರಯತ್ನಿಸಿ ನಡುವೆ ಕೈಬಿಟ್ಟಿದ್ದ ರಷ್ಯಭಾಷೆಯ ಕಲಿಕೆಗೆ ತೊಡಗಿದೆ. ಆ ಭಾಷೆ ಕಷ್ಟದ ಭಾಷೆ. ಅದರ ವ್ಯಾಕರಣ ಬಹುಮಟ್ಟಿಗೆ ಸಂಸ್ಕೃತದ್ದಿದ್ದಂತೆ. ಆದರೆ ಆಸಕ್ತಿ ಛಲಗಳಿದ್ದರೆ ಯಾವುದು ತಾನೇ ಕಷ್ಟ? ಒಂದು ವಾರದಲ್ಲಿ ಲಿಪಿ ಕಲಿತಿದ್ದಾಯಿತು. ಕೈಪಿಡಿ, ಭಾಷಾದರ್ಶಿನಿಗಳು ಬಂದವು. ಎಡಗಡೆ ವ್ಯಾಕರಣ, ಬಲಗಡೆ ಅರ್ಥಕೋಶಗಳನ್ನಿಟ್ಟುಕೊಂಡು, ದಿನಕ್ಕೆ ಎಂಟುಹತ್ತುಗಂಟೆ ದುಡಿದಿದ್ದರ ಫಲವಾಗಿ ಆರೆಂಟು ತಿಂಗಳಲ್ಲಿ ಭಾಷೆ ಹತ್ತಿರವಾಯಿತು. ಸಾಧಾರಣ ಸಮಸ್ಯೆಗಳು ಬಂದಾಗ ಅನಾಮಿಕ, ಇನ್ನೂ ಜಟಿಲ ಸಂದರ್ಭಗಳಲ್ಲಿ ದಿಲ್ಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ರಷ್ಯಭಾಷೆಯಲ್ಲಿ ಪ್ರಾಧ್ಯಾಪಕರಾಗಿರುವ ಗೆಳೆಯ ಡಾ। ಹೇಮಚಂದ್ರಪಾಂಡೆಯವರ ಸಹಾಯ ದೊರೆಯುತ್ತಿತ್ತು. ಹಿಂದಿನವರ್ಷ ನಾನು ಮಾಸ್ಕೊದಲ್ಲಿದ್ದಾಗ ನನ್ನ ಹಿರಿಯ ಮಿತ್ರ ಮೈಸೂರಿನ ಶಾರದಾ ಮಂದಿರದ ಶ್ರೀ ಹೆಚ್. ಎಂ. ಶಂಕರನಾರಾಯಣರಾಯರ ಮಗ ಹರಿಶಂಕರರ ಪರಿಚಯವಾಗಿತ್ತು. ಅವರು ರಷ್ಯಭಾಷೆಯಲ್ಲಿ ಎಂ. ಎ. ಪದವೀಧರರು. ಆಗ ಅಲ್ಲಿನ ರಾದುಗಾ ಪ್ರಕಾಶನದಲ್ಲಿ ಅನುವಾದಕರಾಗಿ ಕೆಲಸ ಮಾಡುತ್ತಿದ್ದರು. ಮೊದಲ ಹತ್ತು ಕವಿತೆಗಳ ಅನುವಾದವನ್ನು ಅವರಿಗೆ ಕಳಿಸಿ ಅಭಿಪ್ರಾಯ ಕೇಳಿದೆ. ಅವರು ನೋಡಿ ಬರೆದರು: "ಕಳೆದ ಒಂದು ವಾರದಲ್ಲಿ ನಿಮ್ಮ ಅನುವಾದಗಳನ್ನು ಸುಮಾರು 10–15 ಬಾರಿ ಓದಿದ್ದೇನೆ. ಓದಿ ಆನಂದಿಸಿದ್ದೇನೆ. ಮೂಲವನ್ನು ಬಿಟ್ಟು ಕನ್ನಡದಲ್ಲೇ ಓದಿದಾಗ ಏನಾದರೂ ವ್ಯತ್ಯಾಸ

ಕಂಡೀತೆಂದು ಕಣ್ಣಲ್ಲಿ ಕಣ್ಣಿಟ್ಟು ನೋಡಿದ್ದೇನೆ. ಅಂತಹ ವ್ಯತ್ಯಾಸಗಳೇನೂ ಕಂಡಿಲ್ಲ.... ನನ್ನ ಅನಿಸಿಕೆಯಲ್ಲಿ, ನಿಮ್ಮ ಅನುವಾದ ಮೂಲದ ಧ್ವನಿಯನ್ನು ನೀಡುವಲ್ಲಿ ಯಶಸ್ವಿಯಾಗಿದೆಯೆಂದು ಅನ್ನಿಸುತ್ತದೆ. ನಿಮ್ಮ ಅನುವಾದವೆಂದು ಹೀಗೆ ಬರೆದಿಲ್ಲ. ವಸ್ತುನಿಷ್ಠವಾಗಿ ಇದನ್ನು ಬರೆದಿದ್ದೇನೆ.'' ಭಾಷೆ ಬಲ್ಲವರ ಆ ಮಾತು ನನಗೆ ಎಷ್ಟು ಧೈರ್ಯ ಪ್ರೋತ್ಸಾಹ ಕೊಟ್ಟಿತೆಂದು ಬೇರೆ ಹೇಳಬೇಕಾಗಿಲ್ಲ.

ಭಾಷೆಯ ಸಮಸ್ಯೆಯನ್ನು ಅನುವಾದದ ಅಗತ್ಯದ ಮಟ್ಟಿಗೆ ಬಗೆಹರಿಸಿಕೊಂಡದ್ದಾಗಿತ್ತು. ಇನ್ನು ಕವಿತೆಯ ಮೂಲಪಾಠಗಳದ್ದು. ನನ್ನಲ್ಲಿದ್ದ ಮೂಲ ಕವಿತೆಗಳು ಸುಮಾರು ಇಪ್ಪತ್ತು. ಅವುಗಳಲ್ಲಿ ಅನೇಕವು ಒಂದೇ ತರಹದವು. ಸುಸ್ಪಷ್ಟ ಕಾರಣಗಳಿಂದಾಗಿ ರಷ್ಯದಲ್ಲಿಯೇ ಅನಾಳ ಕವಿತಾಸಂಗ್ರಹಗಳು ದೊರೆಯುತ್ತಿರಲಿಲ್ಲ. ಆದರೆ ಅದೇ ಹೊತ್ತಿಗೆ ಗ್ಲಾಸ್‌ನಸ್ತ್‌ನಿಂದಾಗಿ ಅವಳ ಕೃತಿಗಳ ಪುನರ್‌ಪ್ರಕಟನೆ ಷುರುವಾಗಿತ್ತು. ಅವುಗಳ ಪ್ರತಿಗಳು ಸಿಗುತ್ತಿದ್ದುದೂ ಕಷ್ಟದಿಂದ. ಹರಿಶಂಕರರೇ ನನ್ನ ಈ ಸಮಸ್ಯೆಯನ್ನೂ ಬಗೆಹರಿಸಿದರು. ಲೆನಿನ್‌ಗ್ರಾಡ್‌ನ ಅವರ ರಷ್ಯದ ಮಿತ್ರರಿಗೆ ಹೇಳಿ ಮೊದಲು ಇನ್ನೂರು ಪುಟಗಳ ಒಂದು ಸಣ್ಣ ಸಂಗ್ರಹ, ಮತ್ತೆ ಎರಡು ತಿಂಗಳು ಬಿಟ್ಟು ಆರುನೂರು ಪುಟಗಳ ಇಡೀ ಸಮಗ್ರ ಬಂದಿತು. ಅದಂತೂ ನಲವತ್ತೆಂಟು ಗಂಟೆಗಳಲ್ಲಿ ಲೆನಿನ್‌ಗ್ರಾಡ್‌ನಿಂದ ಮಾಸ್ಕೊ, ಮಾಸ್ಕೋದಿಂದ ದಿಲ್ಲಿಗೆ ಹಾರಿಬಂದಿತ್ತು. ನಾನು ಗೆದ್ದೆ. ಹರಿಶಂಕರ್ ಹಾಗೂ ಅವರ ಮಿತ್ರರ ಕೃಪೆಯಿಲ್ಲದೆ ಹೋಗಿದ್ದರೆ ಈ ಅನುವಾದಯೋಜನೆ ಖಂಡಿತ ಫಲಿಸುತ್ತಿರಲಿಲ್ಲ. ಹರಿಶಂಕರರು ಸ್ನೇಹಜೀವಿ. ಅವರ ವಿಶ್ವಾಸ, ಔದಾರ್ಯಗಳಿಗೆ ವಂದಿಸಿದಷ್ಟೂ ಕಡಿಮೆಯೇ.

ಈ ವರ್ಷ ಆಗಸ್ಟ್‌ನಲ್ಲಿ ಹರಿಶಂಕರ್ ಮಾಸ್ಕೋದಿಂದ ಮೈಸೂರಿಗೆ ಹಿಂದೆರಳುವ ದಾರಿಯಲ್ಲಿ ದಿಲ್ಲಿಯಲ್ಲಿ ಮೂರುದಿನ ತಂಗಿದ್ದರು. ಆ ಹೊತ್ತಿಗೆ ಅನುವಾದಕಾರ್ಯ ಮುಗಿದಿತ್ತು. ಆ ಮೂರು ದಿನಗಳಲ್ಲಿ ಅವರಿಗೆ ಅನುವಾದ ಓದಿತೋರಿಸಿದೆ. ಅವರು ಕೈಯಲ್ಲಿ ಮೂಲಪಾಠ ಹಿಡಿದು ತಾಳೆನೋಡುತ್ತ ಹೋದರು. ಹೀಗೆ ಓದಲಾದದ್ದು ಸುಮಾರು ಐವತ್ತು ಕವಿತೆಗಳನ್ನು. ಅನುವಾದದ ಪ್ರಾಮಾಣಿಕತೆಯ ಬಗ್ಗೆ ಅವರು ತೃಪ್ತಿ ಸೂಚಿಸಿದರು. ಉಳಿದಿದ್ದ ಕೆಲವೊಂದು ಸಮಸ್ಯೆಗಳನ್ನೂ ಬಗೆಹರಿಸಿದರು. ಅಕ್ಷರ 'ಕವಿಸಂಧಾನ' ಮಾಲೆಗೆ ಹಿಂದೆ ಸುಭಾಷ್ ಮುಖೋಪಾಧ್ಯಾಯರ ಸಂಗ್ರಹದಲ್ಲಿ ಮಾಡಿದ್ದಂತೆ ಈಗಲೂ ಅನಾಳ ನಲವತ್ತು ಕವಿತೆಗಳನ್ನು ಮಾಡುವುದೆಂದುಕೊಂಡಿದ್ದೆ. ಆದರೆ ಅವಳ ಕವಿತೆ ಹತ್ತಿದರೆ ಬಿಡದ ಸಾಂಕ್ರಾಮಿಕ, ಎಷ್ಟು ಮಾಡಿದರೂ 'ಇನ್ನೂ', 'ಇನ್ನೂ' ಎಂದೆನಿಸುವಂತಹದು. ನಲವತ್ತು ದಾಟಿ ನೂರೈವತ್ತಕ್ಕೆ ಹೋಗಿತ್ತು! ಕೊನೆಗೆ ಭಾವನೆಯನ್ನು ಹತ್ತಿಕ್ಕಿ ಅವುಗಳಲ್ಲಿ ಅತ್ಯುತ್ತಮ ಹಾಗೂ ಪ್ರಾತಿನಿಧಿಕವೆನಿಸಿದ ನೂರೊಂದನ್ನು ಮಾತ್ರ ಇಲ್ಲಿ ಉಳಿಸಿಕೊಂಡಿದ್ದೇನೆ. ಇದು ನನ್ನ ಖುಷಿ. ಪ್ರಾಯಶಃ ಕನ್ನಡದ ಗಳಿಕೆಯೂ ಹೌದೇನೊ. ಭಾರವಾಗುವುದಿದ್ದರೆ ಇದನ್ನು ಪ್ರಕಟಿಸುತ್ತಿರುವ ಕೆ. ವಿ. ಸುಬ್ಬಣ್ಣನವರಿಗೆ. ಆದರೆ ಅವರದ್ದು ಕಲ್ಲುಕಬ್ಬಿಣಗಳ ಹೆಗಲು. ಕನ್ನಡದ ಮನೆಗೆ ಇಂತಹ ಅವೆಷ್ಟೋ ಅಡ್ಡೆಗಳನ್ನು ಹೊತ್ತ ಅದು ಇದನ್ನೂ ತಾಳಿಕೊಳ್ಳುತ್ತದೆ. ಈ

ಕೆಲಸದಲ್ಲಿ ಉದ್ದಕ್ಕೂ ಆಸಕ್ತಿ ಉತ್ಸಾಹಗಳನ್ನು ತೋರುತ್ತ ಬಂದಿರುವ ಅವರಿಗೆ ನನ್ನ ಕೃತಜ್ಞತೆಗಳು.

ಆನಾಳ ಸಮಗ್ರಗಳಲ್ಲಿರುವುದು ಸಣ್ಣದು ದೊಡ್ಡದು ಸೇರಿದಂತೆ ೫೫೦ ಕವಿತೆಗಳು. ಅದರಲ್ಲಿ ಆರನೆ–ಒಂದು ಭಾಗಕ್ಕೂ ಹೆಚ್ಚು ಈಗ ಕನ್ನಡಕ್ಕೆ ದೊರೆಯುತ್ತಿದೆಯೆಂಬುದು ನನ್ನ ಪಾಲಿಗೆ ಹೆಮ್ಮೆಯ ವಿಷಯ. ಕವಿತೆಗಳ ಆಯ್ಕೆ ನನ್ನದೇ. ಸಾಧಾರಣವಾಗಿ ಅವಳ ಸುಪ್ರಸಿದ್ಧ ಕವಿತೆಗಳೆಲ್ಲ ಇಲ್ಲಿವೆ. ಮೇಲೆ ವಸ್ತು–ವಿನ್ಯಾಸಗಳ ದೃಷ್ಟಿಯಿಂದಲೂ ಅವಳೆಲ್ಲ ವೈವಿಧ್ಯವನ್ನು ತೋರಿಸುವಂತೆ ಪ್ರಾತಿನಿಧಿಕವಾಗಿದೆ.

ಈ ಅನುವಾದದ ಸಂದರ್ಭದಲ್ಲಿ ನಾನು ಕಲಿತ ಒಂದು ಪಾಠ – ವಿದೇಶೀ ಕವಿತೆಯ ಅನುವಾದದಲ್ಲಿ ತೊಡಗಿರುವ ನನ್ನೆಲ್ಲ ಕವಿಮಿತ್ರರೊಂದಿಗೆ ಹಂಚಿಕೊಳ್ಳ ಬಯಸುವುದು – ಇಂಗ್ಲಿಷ್ ಅನುವಾದಗಳು ಸಾಧಾರಣವಾಗಿ ಮೋಸ, ಅವುಗಳನ್ನು ಆಧಾರವಾಗಿಟ್ಟು ಕನ್ನಡಕ್ಕೆ ಮರುಅನುವಾದ ನಾವು ಮೋಸಕ್ಕೆ ಕೊಡುವ ಚಲಾವಣೆ. ಮೇಲೆ, ಮುಂದೆ ಹೋಗಿ ನಾವು ಇನ್ನೂ ಹೆಚ್ಚು ಸ್ವಾತಂತ್ರ್ಯ ವಹಿಸಿದ್ದಾದರೆ ಮೂಲ ಕವಿಯದ್ದಾಗಿ ಉಳಿಯುವುದು ಬರಿಯ ಅವನ ಹೆಸರಷ್ಟೇ! ಸ್ವತಃ ಇಂಗ್ಲಿಷನ್ನು ಚೆನ್ನಾಗಿ ಬಲ್ಲ ಆನಾಳೇ ಅವಳೆಲ್ಲ ಅನುವಾದಗಳನ್ನೂ ದುಃಖ, ತಿರಸ್ಕಾರಗಳಿಂದ ಕಾಣುತ್ತಿದ್ದಳೆಂಬುದನ್ನು ಇಲ್ಲಿ ನೆನೆಯಬಹುದು. ಒಂದು ಅನುವಾದಕಾರ್ಯ ನಮ್ಮ ಪಾಲಿಗೆ ಅನಿವಾರ್ಯವೆನಿಸಿದರೆ ಮೂಲಭಾಷೆಯನ್ನು ಕಲಿಯುವುದು ಶ್ರೇಷ್ಠ. ಪಟ್ಟು ಹಿಡಿದರೆ ವರ್ಷಕಾಲದಲ್ಲಿ ಯಾವ ಭಾಷೆಯನ್ನಾದರೂ ಕಲಿಯುವುದು ಕಷ್ಟವಲ್ಲ. ಇದು ಸಾಧ್ಯವಾಗದೆ ಇಂಗ್ಲಿಷಿನಿಂದ ಮಾಡದೇ ವಿಧಿಯಿಲ್ಲವೆಂದಾಗ ಯಾರಾದರೂ ಭಾಷಾತಜ್ಞರನ್ನು ಹಿಡಿದು ನಾವು ಆಧರಿಸುವ ಇಂಗ್ಲಿಷ್ ಅನುವಾದ ನೂರಕ್ಕೆ ನೂರಲ್ಲದಿದ್ದರೂ ಬಹುಮಟ್ಟಿಗೆ ಪ್ರಾಮಾಣಿಕವೆಂದಾದರೂ ಖಚಿತಮಾಡಿಕೊಳ್ಳಬೇಕು. ಅನುವಾದದಲ್ಲಿ ಕವಿತೆ ಮರಗಟ್ಟದೆ ಕವಿತೆಯಾಗಿ ಧ್ವನಿಸಬೇಕಾದದ್ದು ಬಹುಮುಖ್ಯ, ನಿಜ. ಜತೆಗೇ ಅದು ಮೂಲಕ್ಕೆ ಪ್ರಾಮಾಣಿಕವಾಗಿರುವುದೂ ಅಗತ್ಯ. ಮೂಲದ ಭಾಷೆ, ಅನುವಾದದ ಭಾಷೆಗಳಲ್ಲಿನ ಅಂತರ್ಗತ ಪ್ರವೃತ್ತಿಗಳಲ್ಲಿರುವ ವ್ಯತ್ಯಾಸದಿಂದಾಗಿ ಕಟ್ಟುನಿಟ್ಟಾದ ಪ್ರಾಮಾಣಿಕತೆ ಅನುವಾದದಲ್ಲಿ ಕವಿತೆಯ ನಡೆ, ಧ್ವನಿಗಳಿಗೆ ಅಡ್ಡ ತರುತ್ತದೆಯೆಂದಾದರೆ ಮಾತ್ರ ಅಗತ್ಯವಿದ್ದಷ್ಟು ಸ್ವಾತಂತ್ರ್ಯ ವಹಿಸಬಹುದು. ಇದು ನನಗೆ ನಾನೇ ಹಾಕಿಕೊಂಡ ನಿಯಮ. ಇದನ್ನು ಇಲ್ಲಿಯೂ ಪಾಲಿಸಿದ್ದೇನೆ.

ಆನಾ ಆಹ್ಮತೋವಾ ವೈಯಕ್ತಿಕವಾಗಿ ನನಗೆ ಅತಿ ಹೆಚ್ಚಿನ ತೃಪ್ತಿ, ಸಂತೋಷ, ಸ್ಫೂರ್ತಿಗಳನ್ನು ಕೊಟ್ಟ ಕವಿ. ನನಗೆ ದಕ್ಕಿದ ಆ ಲಾಭದ ಶತಾಂಶವಾದರೂ ಈ ಅನುವಾದದಿಂದ ಕನ್ನಡಿಗರಿಗೆ ದೊರೆತದ್ದಾದರೆ ನನ್ನ ಶ್ರಮಸಾಹಸಗಳು ಸಾರ್ಥಕ.

೩೦ ಅಕ್ಟೋಬರ್ ೧೯೯೦
ಹೊಸದಿಲ್ಲಿ

**ಶಾ. ಬಾಲುರಾವ್.**



# ೧. 'ರಿಕ್ವಿಯಂ' ('ಶಾಂತಿಗೀತೆ')

ಅಲ್ಲ, ಪರಕೀಯ ಆಕಾಶಗುಮ್ಮಟಗಳ ಕೆಳಗಲ್ಲ
ಪರರ ರೆಕ್ಕೆಗಳ ಆಶ್ರಯದಲ್ಲಲ್ಲ
ನಾನಾಗ ನನ್ನ ಜನರ ಜತೆಗಿದ್ದೆ —
ಎಲ್ಲಿ ನನ್ನ ಜನ ವಿಪತ್ತಿಗೀಡಾಗಿದ್ದರೋ ಅಲ್ಲಿ.
೧೯೬೧

## ಮುನ್ನುಡಿಯ ಬದಲು

ಯೆಷೋವ್‌ನ ಆಳಿಕೆಯ ಆ ಭೀಕರವರ್ಷಗಳಲ್ಲಿ ನಾನು ಹದಿನೇಳು ತಿಂಗಳಗಳ ಕಾಲ ಲೆನಿನ್‌ಗ್ರಾಡ್‌ನ ಸೆರೆಮನೆಯ ಮುಂದೆ ಜನರ ಸಾಲಿನಲ್ಲಿ ನಿಂತು ಕಳೆದೆ. ಒಮ್ಮೆ ಅಲ್ಲಿ ಯಾರೋ ಒಬ್ಬರು ನನ್ನನ್ನು 'ಗುರುತಿಸಿದರು'. ನನ್ನ ಹಿಂದೆ ಹೆಂಗಸೊಬ್ಬಳು ನಿಂತಿದ್ದಳು. ಚಳಿಯಿಂದಾಗಿ ಅವಳ ತುಟಿಗಳು ನೀಲಿಗಟ್ಟಿದ್ದವು. ಅವಳೆಂದೂ ನನ್ನ ಹೆಸರನ್ನು ಕೇಳಿದವಳಲ್ಲ. ಆ ಕಾಲದಲ್ಲಿ ನಮಗೆಲ್ಲ ಸಾಮಾನ್ಯವಾಗಿದ್ದ ನಿಶ್ಚೇಷ್ಟತೆಯಿಂದ ಎಚ್ಚೆತ್ತು, ಅವಳು ನನ್ನ ಕಿವಿಯಲ್ಲೊಂದು ಪ್ರಶ್ನೆ ಉಸುರಿದಳು (ಅಲ್ಲಿ ಎಲ್ಲರೂ ಮಾತಾಡುತ್ತಿದ್ದದ್ದು ಪಿಸುಮಾತಿನಲ್ಲಿಯೇ):

"ಇದನ್ನೆಲ್ಲಾ ನೀನು ವರ್ಣಿಸಬಲ್ಲೆಯಾ?"

ನಾನಂದೆ :

"ಓಹೋ!"

ಆಗ ಅವಳ ಮುಖದ ಮೇಲೆ – ಅಲ್ಲ, ಹಿಂದೊಮ್ಮೆ ಅವಳ ಮುಖವಾಗಿದ್ದುದರ ಮೇಲೆ – ಮುಗುಳುನಗೆಯನ್ನು ಹೋಲುವಂತಹದೇನೋ ಸುಳಿದುಹೋಯಿತು.

೧ ಏಪ್ರಿಲ್ ೧೯೫೭
**ಲೆನಿನ್‌ಗ್ರಾದ್**

## ಸಮರ್ಪಣೆ

ಈ ದುಃಖದ ಮುಂದೆ ಪರ್ವತಗಳು ಬಾಗುತ್ತವೆ
ಮಹಾನದಿ ಇನ್ನು ಹರಿಯಲಾರದೆ ನಿಲ್ಲುತ್ತದೆ
ಆದರೆ ಸೆರೆಮನೆಯ ಬೀಗಗಳು ಮಾತ್ರ ಜಗ್ಗದೆ ಇವೆ
ಅಲ್ಲಿ ಅವುಗಳ ಹಿಂದಿವೆ – 'ಕಠಿಣ ಶಿಕ್ಷೆ'ಗೆ ಗುರಿಯಾದವರ ಗೂಡುಗಳು
ಹಾಗೂ ಸಾವಿನ ಯಾತನೆ.
ಎಲ್ಲೋ ಯಾರ ಪಾಲಿಗೋ ತಂಗಾಳಿ ಬೀಸಿದೆ
ಮತ್ತಾರಿಗೋ ಸಂಜೆಬಿಸಿಲು ಖುಷಿ ಕೊಡುತ್ತಿದೆ
ಆದರೆ ಅವನ್ನು ನಾವು ಕಾಣೆವು, ಎಲ್ಲೆಲ್ಲೂ ನಮ್ಮ ಪಾಡು ಒಂದೇ
ನಮಗೆ ಕೇಳುವುದು ಬೀಗದಕೈಗಳ ಕಠೋರ ಶಬ್ದ
ಮತ್ತು ಸಿಪಾಯಿಗಳ ಭಾರವಾದ ಹೆಜ್ಜೆಸಪ್ಪಳ ಮಾತ್ರ
ಮುಂಜಾವಿನ ಪ್ರಾರ್ಥನೆಗೆ ಏಳುವವರಂತೆ ಮುಂಚೆ ಎದ್ದು
ಈ ರಾಕ್ಷಸ ನಗರದ ರಸ್ತೆಗಳಲ್ಲಿ ನಡೆದು ಹೋಗುತ್ತಿದ್ದವು
ಅಲ್ಲಿ ಉದ್ದಕ್ಕೂ ಸತ್ತ ಹೆಣಗಳಂತಹ ಜನ ಎದುರಾಗುತ್ತಿದ್ದರು
ಸೂರ್ಯನಿನ್ನೂ ದಿಗಂತದ ತಳದಲ್ಲಿರುತ್ತಿದ್ದ, ನೀವಾ ನದಿ ಮಂಜಿನಿಂದ ಮುಚ್ಚಿರುತ್ತಿತ್ತು
ಆದರೂ ದೂರದಲ್ಲೆಲ್ಲೊ ಆಸೆ ಮೊರೆಯುತ್ತಿರುತ್ತಿತ್ತು.
ತೀರ್ಪು ಹೊರಬಿತ್ತು ... ಹಿಂದೆಯೇ ಕಣ್ಣೀರಿನ ಹುಚ್ಚುಹೊಳೆ.
ಗುಂಪಿನಲ್ಲೊಬ್ಬಳು ಎಲ್ಲರಿಂದ ಬೇರೆಯಾಗುತ್ತಾಳೆ –
ಯಾತನಾಪೂರ್ವಕವಾಗಿ ಎದೆಯಿಂದ ಪ್ರಾಣವನ್ನು ಕಿತ್ತು ತೆಗೆದಂತೆ
ಯಾರೋ ಹಿಂದುಮುಂದಾಗಿ ತಳ್ಳಿದರೋ ಎಂಬಂತೆ.
ಆದರೂ ನಡೆದು ಹೋಗುತ್ತಾಳೆ... ತೂರಾಡುತ್ತ ... ಒಬ್ಬಳೇ.
ಆ ದೆವ್ವ ಬಡಿದ ಎರಡು ವರ್ಷಗಳಲ್ಲಿ ಅಲ್ಲಿ ಅನಾಯಾಸವಾಗಿ
ನನ್ನ ಗೆಳತಿಯಾದವರೆಲ್ಲರೂ ಈಗ ಎಲ್ಲಿ ಹೋದರು?

ಸೈಬೀರಿಯಾದ ಹಿಮಮಾರುತ ಅವರಿಗೆ ಹೇಗನಿಸುತ್ತದೆ?
ಚಂದ್ರನ ಶೀತಲವರ್ತುಳ ಹೇಗನಿಸುತ್ತದೆ?
ಇದೊ, ಅವರೆಲ್ಲರಿಗೂ ನನ್ನ ಅಂತಿಮ ಅಭಿವಂದನೆ.

ಮಾರ್ಚ್ ೧೯೪೦

## ಪೀಠಿಕೆ

ಸತ್ತವರಷ್ಟೇ ತಮಗೆ ಸಿಕ್ಕ ಚಿರಶಾಂತಿಗೆ ಖುಷಿಪಟ್ಟು
ನಸುನಗುತ್ತಿದ್ದ ಕಾಲವದು.
ಲೆನಿನ್‌ಗ್ರಾದ್ ಪಟ್ಟಣ ಸೆರೆಮನೆಗಳ ಅಂಚಿನಲ್ಲಿ
ಕೆಲಸಕ್ಕೆ ಬಾರದ ಬಾಲದಂತೆ ಜೋತಾಡುತ್ತಿತ್ತು.
ಚಿತ್ರಹಿಂಸೆಗೊಳಗಾಗಿ ಬಂದಿಗಳು ಬುದ್ಧಿ ಕಳೆದುಕೊಂಡಿದ್ದರು
ತುಕಡಿತುಕಡಿಗಳಾಗಿ ಅವರನ್ನು ಸಾಗಹಾಕಲಾಗುತ್ತಿತ್ತು
ಇಂಜಿನ್ನಿನ ಸಿಳ್ಳೆಗಳು ಕ್ಷಣಕಾಲ ಕೂಗಿ
ವಿದಾಯಗಾನ ಹಾಡಿದ್ದವು.
ಸಾವು ತಲೆಯ ಮೇಲೆ ನಕ್ಷತ್ರದಂತೆ ತೂಗಾಡುತ್ತಿತ್ತು
ರಕ್ತ ಮೆತ್ತಿದ ಬೂಟುಗಳಡಿ
'ಬ್ಲ್ಯಾಕ್ ಮಾರಿಯಾ'ದ ಚಕ್ರಗಳಡಿ
ನಿರಪರಾಧಿ ರಷ್ಯ ವಿಲಿವಿಲಿ ಒದ್ದಾಡಿತ್ತು.

## I

ಆ ಮುಂಜಾನೆ ಅವರು ನಿನ್ನನ್ನು ಕೊಂಡೊಯ್ದರು
ಶವದ ಹಿಂದೆ ಹಿಂದೆ ಹೋಗುವಂತೆ ನಾನು ನಿನ್ನನ್ನು ಹಿಂಬಾಲಿಸಿದೆ
ಒಳಗೆ ಕತ್ತಲಕೋಣೆಯಲ್ಲಿ ಮಕ್ಕಳು ಗೋಳಿಡುತ್ತಿದ್ದವು.
ದೇವರಗೂಡಿನಲ್ಲಿ ಮೋಂಬತ್ತಿ ಕೋಡಿಹರಿಸಿ ಉರಿಯುತ್ತಿತ್ತು.

ನಿನ್ನ ತುಟಿಗಳು ದೇವರ ಪ್ರತಿಮೆಯಂತೆ ಕೊರೆಯುತ್ತಿದ್ದವು
ಹಣೆಯ ಮೇಲೆ ಸಾವಿನ ಗಳಿಗೆಯ ಬೆವರಿತ್ತು ... ಹೇಗೆ ಮರೆಯಲಿ !
ಕ್ರೆಮ್ಲಿನ್ನಿನ ಕೋಟೆಗೋಡೆಯ ಮುಂದೆ ನಿಂತು
'ಸ್ತ್ರೆಲ್ತ್ಸಿ'ಯ ಹೆಂಡಂದಿರಂತೆ ಹುಯಿಲಿಡುತ್ತೇನೆ.

ಮಾಸ್ಕೊ ೧೯೩೮

## II

ಶಾಂತ ನದಿ ದೋನ್ ಪ್ರಶಾಂತವಾಗಿ ಹರಿದಿದೆ
ಹಳದಿ–ಚಂದ್ರ ಮನೆಯೊಳಗೆ ಸುಳಿದು ಬರುತ್ತಾನೆ.
ಬರುತ್ತಾನೆ, ಟೋಪಿ ಓರೆಮಾಡಿಕೊಂಡು.
ಕಾಣುತ್ತಾನೆ, ಹಳದಿ–ಚಂದ್ರ ಅಲ್ಲಿ ನೆರಳೊಂದನ್ನು
ಈ ಹೆಂಗಸು ಅಸ್ವಸ್ಥೆ
ಈ ಹೆಂಗಸು ಏಕಾಕಿ
ಗಂಡ ಗೋರಿಯೊಳಗಡೆ, ಮಗ ಸೆರೆಮನೆಯಲ್ಲಿ
ಓ, ದೇವರಲ್ಲಿ ನನಗಾಗಿ ಮೊರೆಯಿಡಿ.

## III

ಇಲ್ಲ, ಇದು ನಾನಲ್ಲ. ಇಲ್ಲಿ ನರಳುತ್ತಿರುವವರು ಮತ್ತಾರೊ.
ನನ್ನಿಂದ ಇದನ್ನು ಸಹಿಸುವುದು ಸಾಧ್ಯವೇ ಇರಲಿಲ್ಲ
ಕಪ್ಪುಬಟ್ಟೆ ಹೊದಿಸಿ ಮುಚ್ಚಿಬಿಡಿ
ಈ ದೀಪಗಳನ್ನು ಕೊಂಡೊಯ್ಯಿರಿ ...

ರಾತ್ರಿ.

## IV

ಎಲೆ ಕುಚೋದ್ಯದ ಹೆಣ್ಣೆ, ಗೆಳೆಯರೆಲ್ಲರ ಅಚ್ಚುಮೆಚ್ಚೆ,
ತ್ಸಾರ್‌ಸ್ಕೋಯೆ ಸೆಲೋದ ಖುಷಿವಂತ ಪಾಪಿಯೆ,
ನಿನ್ನ ಬದುಕು ಎತ್ತ ತಿರುಗುವುದೆಂದು
ನಿನಗೆ ಮುಂಗಾಣಿಸಬೇಕಾಗಿತ್ತು –
ಹೇಗೆ ಸಾಲಿನಲ್ಲಿ ಮುನ್ನೂರನೆಯವಳಾಗಿ, ಕೈಯಲ್ಲಿ ಕಟ್ಟುಹಿಡಿದು
'ಶಿಲುಬೆ'ಗಳಡಿ ನೀನು ನಿಲ್ಲಬೇಕಾಗುವುದೆಂದು,
ಹೇಗೆ ನಿನ್ನ ಸುಡುಬಿಸಿ ಕಣ್ಣೀರಿಗೆ
ಹೊಸವರ್ಷದ ಮಂಜುಗಡ್ಡೆ–ನೆಲ ಕರಗತೊಡಗುವುದೆಂದು,
ಹೇಗೆ ಬಂದೀಖಾನೆಯ ಪಾಪ್ಲರ್ ಮರ ನಡುಗುತ್ತಿರುತ್ತದೆಂದು
ಅಲ್ಲಿನ ನೀರವದಲ್ಲಿ ಅದೆಷ್ಟು
ನಿಷ್ಕಳಂಕ ಜೀವಗಳು ಕೊನೆಗಾಣುತ್ತಿರುತ್ತವೆಂದು.

## V

ಹದಿನೇಳು ತಿಂಗಳುಗಳಿಂದ ಅರಚಿದ್ದೇನೆ
ಮನೆಗೆ ಬಾ ಎಂದು ಕರೆದಿದ್ದೇನೆ
ಗಲ್ಲುಗಾರರ ಕಾಲಿಗೆ ಅಡ್ಡಬಿದ್ದಿದ್ದೇನೆ.
ಮಗನೇ, ನೀನು ನನ್ನ ಭೀತಿ.
ಇಲ್ಲಿ ಎಲ್ಲ ಎಂದೆಂದಿಗೂ ಗೋಜಾಗಿದೆ
ಈಗ ನನಗೆ ಯಾವನು ಮನುಷ್ಯ, ಯಾವದು ಮೃಗ,
ಗಲ್ಲಿನ ಸುದ್ದಿಗೆ ಇನ್ನು ಎಷ್ಟು ಕಾಲ ಕಾಯಬೇಕು –
ಒಂದೂ ತಿಳಿಯುತ್ತಿಲ್ಲ.
ಇಲ್ಲೋ ವಿಲಕ್ಷಣ ಪುಷ್ಪಗಳು
ಧೂಪದ ತಟ್ಟೆಗಳ ಝಣತ್ಕಾರ, ಎಲ್ಲಿಂದಲೋ ಹೊರಟು
ಎಲ್ಲೂ ಮುಟ್ಟದ ಹೆಜ್ಜೆಗುರುತುಗಳು
ದುರುಗುಟ್ಟು ನನ್ನನ್ನೇ ನೋಡುತ್ತ
ಶೀಘ್ರವಿನಾಶದ ಭಯ ಹುಟ್ಟಿಸುವ
ಒಂದು ಪ್ರಚಂಡ ನಕ್ಷತ್ರ.

## VI

ವಾರದ ಮೇಲೆ ವಾರ ಸಲೀಸಾಗಿ ಉರುಳಿಹೋಗುತ್ತಿದೆ
ಏನಾಯಿತೆಂದು ನನಗೆ ಅರ್ಥವಾಗುತ್ತಿಲ್ಲ.
ಸೆರೆಮನೆಯಲ್ಲಿ ರಷ್ಯದ ಶ್ವೇತರಾತ್ರಿಗಳು
ಹಿಂದೆ ಹೇಗೆ ನಿನ್ನತ್ತ ನೋಡುತ್ತಿದ್ದವು
ಮತ್ತೆ ಹದ್ದಿನ ಉರಿಗಣ್ಣನೋಟ ಬೀರುತ್ತ
ಹೇಗೆ ದುರುಗಟ್ಟಿ ನೋಡುತ್ತವೆ
ನೀ ಹೊತ್ತ ಉನ್ನತ ಶಿಲುಬೆಯ ಬಗ್ಗೆ, ನಿನ್ನ ಸಾವಿನ ಬಗ್ಗೆ
ಅವು ಏನನ್ನುತ್ತವೆ.

೧೯೩೯

## VII
### ತೀರ್ಪು

ನನ್ನ ಈ ಇನ್ನೂ ಜೀವಂತ ಎದೆಯ ಮೇಲೆ
ಬಂದು ಬಿದ್ದಿತು ಆ ಪಾಷಾಣ ಶಬ್ದ.
ಬೀಳಲಿ ಬಿಡು, ಅದಕ್ಕೆ ನಾನು ಸಿದ್ಧಳಿದ್ದೆ
ಹೇಗೋ ಸಹಿಸಿಕೊಳ್ಳುತ್ತೇನೆ.

ಇವೊತ್ತು ನನಗೆ ಮಾಡಲು ಬಹಳಷ್ಟಿದೆ :
ನೆನಪನ್ನು ಅಂತಃ ಕೊಲ್ಲಬೇಕು
ಎದೆಯನ್ನು ಕಲ್ಲುಮಾಡಿಕೊಳ್ಳಬೇಕು
ಮತ್ತೊಮ್ಮೆ ಬಾಳಲು ಕಲಿಯಬೇಕು.

ಇಲ್ಲವೋ .... ಭಣಭಣಿಸುವ ಈ ಉರಿಬೇಸಿಗೆ
ಕಿಟಕಿಯಲ್ಲಿ ಕಾಣುವ ಮೋಜಿನ ದೃಶ್ಯದಂತಾಗಿಬಿಡುತ್ತದೆ
ಈ ಜ್ವಲಂತ ದಿನ, ಈ ಖಾಲಿ ಮನೆ
ಎಂದೋ ನನಗೆ ಇವುಗಳ ಮುನ್ನರಿವಾಗಿತ್ತು.

೧೯೩೯

## VIII
## ಯಮರಾಯನಿಗೆ

ಹೇಗೂ ನೀನು ಬರುವವನು – ಇಂದೇ ಏಕೆ ಬರಬಾರದು?
ನಿನಗಾಗಿ ಕಾಯುತ್ತಿದ್ದೇನೆ – ನನಗಿನ್ನು ಸಹಿಸಲಾಗುವುದಿಲ್ಲ.
ದೀಪವಾರಿಸಿದ್ದೇನೆ, ನಿನಗಾಗಿ ಬಾಗಿಲು ತೆರೆದಿದ್ದೇನೆ
ಓ, ಇದೆಷ್ಟು ಸುಲಭ, ಎಷ್ಟು ವಿಚಿತ್ರ.
ಯಾವ ರೂಪವನ್ನಾದರೂ ತಾಳಿ ಬಾ
ವಿಷಗಾಳಿಯ ಮದ್ದುಗುಂಡಾಗಿ ಬಾ
ಕೈಯಲ್ಲಿ ಕಲ್ಲುದೊಣ್ಣೆ ಹಿಡಿದು ದಾರಿಗಳ್ಳನಂತೆ ಕದ್ದು ಬಾ
ಅಥವಾ ಟೈಫಸ್‌ನ ರೋಗಾಣುವಾಗಿ ಬಂದು ಕೊಲ್ಲು.
ಇಲ್ಲವೇ ನನ್ನ ವಿರುದ್ಧ ಏನಾದರೂ ಕತೆ ಕಟ್ಟಿ ತಾ
ಇವೆಲ್ಲ ವಾಕರಿಕೆ ಹುಟ್ಟಿಸುವಷ್ಟರ ಮಟ್ಟಿಗೆ ಗೊತ್ತಿದ್ದದ್ದೇ –
ನೀನು ಬರುವುದು ಕಟ್ಟಡದ ಕಾವಲಾಳಿನ ನೀಲಿಟೋಪಿಯ ಮೇಲಿಂದ,
ಅವನ ದಿಗಿಲುಬಡಿದು ಬಿಳಚಿದ ಮುಖದಿಂದ ತಿಳಿಯುತ್ತದೆ.
ಈಗ ನನಗೆಲ್ಲ ಒಂದೇ. ಯೆನಿಸೆಯ್ ನದಿ ಅಬ್ಬರಿಸಿ ಹರಿದಿದೆ
ಧ್ರುವನಕ್ಷತ್ರ ಪ್ರಜ್ವಲಿಸುತ್ತಿದೆ.
ಆ ಪ್ರಿಯಜೀವದ ಕಣ್ಣಿನ ನೀಲಪ್ರಭೆ
ನನ್ನ ಕೊಟ್ಟಕೊನೆಯ ಭೀತಿಯನ್ನು ಮುಚ್ಚುತ್ತದೆ.

## IX

ಈಗಾಗಲೇ ಹುಚ್ಚು ತನ್ನ ರೆಕ್ಕೆ ಹರಡಿ
ನನ್ನ ಆತ್ಮದ ಅರ್ಧಭಾಗವನ್ನು ಆವರಿಸಿದೆ
ಉರಿಮದ್ಯವನ್ನು ಕುಡಿಸಿ ಕುಡಿಸಿ
ನನ್ನನ್ನು ಕಪ್ಪುಕಣಿವೆಯ ಕಡೆಗೆ ಸೆಳೆಯುತ್ತಿದೆ.

ನಾ ಬಲ್ಲೆ, ಅದಕ್ಕೆ ಮಣಿದು
ನಾನು ಸೋಲೊಪ್ಪಿಕೊಳ್ಳಬೇಕು
ಬೇರೆ ಯಾರದೋ ಎಂಬಂತೆ ನಾನೇ ನನ್ನ
ಬಡಬಡಿಕೆಯನ್ನು ಆಲಿಸುತ್ತ ಕಾಲಹಾಕಿದ್ದೇನೆ.

ನನ್ನ ಮಗನ ಭೀಕರ ಕಣ್ಣುಗಳೆ
ಅಥವಾ ಕಲ್ಲಾದ ಅವನ ಯಾತನೆಯೆ,
ಸಿಡಿಲುಮಳೆ ಜಡಿಯುತ್ತಿದ್ದ ಆ ದಿನವೆ
ಅಥವಾ ಸೆರೆಮನೆಯ ಭೇಟಿಯ ವೇಳೆಯೆ,

ಅವನ ತಂಪುಕೈಗಳ ಮಧುರಸ್ಪರ್ಶವೆ
ಅಥವಾ ಲಿಂಡನ್ ಮರಗಳ ಅಶಾಂತ ಛಾಯೆಗಳೆ,
ದೂರದ ಮೃದುವಾದ ಶಬ್ದಗಳೆ
ಅಥವಾ ಸಾಂತ್ವನದ ಕೊನೆಯ ಮಾತುಗಳೆ,

ಉಹ್ಞೂ, ನಾನೆಷ್ಟೇ ಕಾಡಲಿ
ಕಾಲಿಗೆ ಬಿದ್ದು ಬೇಡಲಿ
ಅದು ಇವ್ಯೊಂದನ್ನೂ ನನ್ನ ಜತೆ
ಕೊಂಡುಹೋಗಲು ಬಿಡುವುದಿಲ್ಲ

೧೯೪೦

## X
## ಶಿಲುಬೆಯೇರಿದ್ದು

'ನನಗಾಗಿ ಅಳಬೇಡಮ್ಮ
ನಾನು ಗೋರಿಯೊಳಗಿದ್ದೇನೆ'.

೧

ದೇವದೂತರು ಆ ಮಹಾಗಳಿಗೆಯನ್ನು ಹಾಡಿ ಕೊಂಡಾಡಿದ್ದರು
ಸ್ವರ್ಗಲೋಕಗಳು ಬೆಂಕಿಯಲ್ಲಿ ಉರಿದು ಕರಗಿಹೋಗಿದ್ದವು
ಅವನು ತಂದೆಯನ್ನು ಕೇಳಿದ್ದ – "ನೀನು ನನ್ನ ಕೈಬಿಟ್ಟದ್ದೇಕೆ?"
ಮತ್ತ ತಾಯಿಗೆ ಹೇಳಿದ್ದ – "ಓ, ನನಗಾಗಿ ಅಳಬೇಡಮ್ಮ".

೨

ಅವನ ಅಚ್ಚುಮೆಚ್ಚಿನ ಅನುಯಾಯಿ ಮೇರಿ ಮಾಗ್ದಲೀನ್
ಎದೆಬಡಿದುಕೊಂಡು ಅತ್ತು ಅತ್ತು ಕಲ್ಲಾಗಿಹೋಗಿದ್ದಳು
ಆದರೆ ಇನ್ನೊಂದೆಡ, ಅವನ ತಾಯಿ ಮೌನದಿಂದ ನಿಂತಿದ್ದೆಡೆ,
ಯಾರಿಗೂ ಕಣ್ಣುಹಾಯಿಸುವ ಧೈರ್ಯವಿರಲಿಲ್ಲ.

## ಉಪಸಂಹಾರ

೧

ಮುಖಗಳು ಹೇಗೆ ಜೋತುಬೀಳುತ್ತವೆಂಬುದನ್ನು ಕಂಡೆ
ಕಣ್ಣರೆಪ್ಪೆಗಳಡಿಯಿಂದ ಭೀತಿ ಹೇಗೆ ಇಣಿಕಿಹಾಕುವುದೆಂದು ಕಂಡೆ
ಕೆನ್ನೆಯ ಪುಟಗಳ ಮೇಲೆ ಯಾತನೆ ಹೇಗೆ
ಗುಪ್ತಲಿಪಿಯಲ್ಲಿ ಅಂಕಿತ ಹಾಕುವುದೆಂದು ಕಂಡೆ
ಕಪ್ಪು–ಬೂದಲು ಬಣ್ಣಗಳ ಸುರುಳಿಗೂದಲು
ಹೇಗೆ ಬೆಳ್ಳಿಗೆ ತಿರುಗುವುದೆಂದು ಕಂಡೆ
ಬಿಗಿದ ತುಟಿಗಳ ಮೇಲೆ ಮಂದಹಾಸ ಹೇಗೆ ಮಾಸುವುದೆಂದು ಕಂಡೆ
ಒಣನಗೆಯಲ್ಲಿ ಭಯ ಹೇಗೆ ಕಂಪಿಸುವುದೆಂದು ಕಂಡೆ.
ನಾನು ಮೊರೆಯಿಡುವುದು ನನಗೊಬ್ಬಳಿಗಾಗಿ ಅಲ್ಲ
ಅಲ್ಲಿ, ಆ ಕೆಂಪುಗೋಡೆಗಳ ಕೆಳಗೆ
ಭೀಕರ ಚಳಿಯಲ್ಲಿ, ಮತ್ತೆ ಜುಲೈ ತಿಂಗಳ ಉರಿಬಿಸಿಲಿನಲ್ಲಿ
ನನ್ನೊಂದಿಗೆ ನಿಂತಿರುತ್ತಿದ್ದ ಪ್ರತಿಯೊಬ್ಬರ ಪರವಾಗಿ.

೨

ಮತ್ತೊಮ್ಮೆ ಮೃತರ ಆತ್ಮಕ್ಕೆ ಶಾಂತಿಕೋರುವ ವೇಳೆ ಬಂದಿದೆ
ನಿಮ್ಮನ್ನೆಲ್ಲ ನೋಡುತ್ತಿದ್ದೇನೆ, ಕೇಳುತ್ತಿದ್ದೇನೆ, ಭಾವಿಸುತ್ತಿದ್ದೇನೆ –
ಕಿಟಕಿಯವರೆಗೂ ನಡೆಯಲಾರದೆ ಕೆಳಗುರುಳಿಬಿದ್ದವಳನ್ನು,

ಇನ್ನು ಈ ತಾಯಿನೆಲವನ್ನು ತುಳಿಯುವ ಭಾಗ್ಯವಿಲ್ಲದಾದವಳನ್ನು,
ತನ್ನ ಚೆಂದಲೆಯನ್ನು ಕುಣಿಸುತ್ತ
'ಇಲ್ಲಿಗೆ ಬರುವುದೆಂದರೆ ಮನೆಗೆ ಬಂದಂತೆ' ಎನ್ನುತ್ತಿದ್ದವಳನ್ನು.
ಎಲ್ಲರನ್ನೂ ಅವರವರ ಹೆಸರು ಹಿಡಿದು ಕರೆವ ಆಸೆ
ಆದರೆ ಆ ಪಟ್ಟಿ, ಗುರುತಿಸಲು ಅದಿಲ್ಲ, ಎಂದೋ ಜಪ್ತಿಯಾಯಿತು
ಅವರುಗಳ ಬಾಯಿಂದ ಆಗಾಗ್ಗ ಕೇಳಿಬರುತ್ತಿದ್ದ ಕೆಲವೇ ಮಾತುಗಳಿಂದಲೇ
ಶಬ್ದದ ಈ ವಿಶಾಲ ಶವವಸ್ತ್ರವನ್ನು ಅವರಿಗಾಗಿ ನೆಯ್ದಿದ್ದೇನೆ
ಅವರನ್ನು ಎಲ್ಲೆಲ್ಲೂ, ಯಾವಾಗಲೂ ನೆನೆಯುತ್ತೇನೆ
ಹೊಸ ವಿಪತ್ತುಗಳು ಏನೇ ಬರಲಿ ಅವರನ್ನು ಮರೆಯುವುದಿಲ್ಲ
ಹತ್ತುಕೋಟಿ ಜನರ ಹುಯಿಲಿಗೆ ದನಿಗೊಡುವ
ನನ್ನ ಬಾಯನ್ನು ಮುಚ್ಚಬಯಸುವವರು
ಕನಿಷ್ಠ ನನ್ನ ಶವಸಂಸ್ಕಾರದ ದಿನವಾದರೂ
ನನ್ನನ್ನು ನೆನಸಿಕೊಳ್ಳಲಿ.
ಈ ದೇಶದಲ್ಲಿ ಎಂದಾದರೊಂದು ದಿನ
ನನಗೆ ಸ್ಮಾರಕ ನಿರ್ಮಿಸುವುದಾದರೆ
ಅದಕ್ಕೆ ನನ್ನ ಒಪ್ಪಿಗೆಯಿದೆ
ಆದರೆ ಒಂದು ಕರಾರು – ಅದನ್ನು ನಿರ್ಮಿಸಬೇಕಾದುದು
ನಾನು ಹುಟ್ಟಿದ ಸಮುದ್ರ–ಸಮೀಪದಲ್ಲಲ್ಲ
ಸಮುದ್ರದೊಡನಿದ್ದ ನನ್ನ ಕೊನೆಯ ನಂಟು ಎಂದೋ ಕಡಿದುಹೋಯಿತು
ಅಥವಾ ತ್ಸಾರ್‌ಸ್ಕೋಯೆಯ ತೋಟದಲ್ಲಿ ಅಶಾಂತ ನೆರಳೊಂದು ನನ್ನನ್ನು
ಅರಸುತ್ತಿರುವ ಆ ಮೆಚ್ಚಿನ ಮರದ ಮೋಟಿನ ಬದಿಯಲ್ಲೂ ಅಲ್ಲ
ಆದರೆ ಇಲ್ಲಿ, ಮುನ್ನೂರು ಗಂಟೆಗಳ ಕಾಲ ನಾನು ನಿಂತ ಈ ಸ್ಥಳದಲ್ಲಿ
ನನ್ನ ಪಾಲಿಗೆ ಸೆರೆಮನೆಯ ಬೀಗ ತೆರೆಯದೆ ಹೋದ ಆ ಇಲ್ಲಿ.
ಇಲ್ಲೇ ಏಕೆ? ಸೆರೆಮನೆಯ ಬಾಗಿಲು ನನ್ನ ಮುಖಕ್ಕೆ ಬಡಿಯುತ್ತಿದ್ದುದನ್ನು,
'ಬ್ಲ್ಯಾಕ್ ಮಾರಿಯಾ'ದ ಎದೆ ನಡುಗಿಸುವ ಗಡಗಡ ಶಬ್ದವನ್ನು
ಮುದುಕಿಯೊಬ್ಬಳು ಗಾಯಗೊಂಡ ಮೃಗದಂತೆ ಅರಚುತ್ತಿದ್ದುದನ್ನು
ಸತ್ತಮೇಲೆ ಎಲ್ಲಿ ನಾನು ಮರೆತುಬಿಡುವೆನೊ ಎಂಬ ಭಯದಿಂದಾಗಿ.
ಅಲ್ಲಿ ನನ್ನ ಕಂಚಿನ ಶಿಲ್ಪದ ನೆಟ್ಟಕಣ್ಣುಗಳಿಂದ
ಕರಗುವ ಹಿಮ ಕಣ್ಣೀರಿನಂತೆ ಹರಿಯುತ್ತಿರಲಿ
ದೂರದಲ್ಲಿ ಸೆರೆಮನೆಯ ಪಾರಿವಾಳಗಳು 'ಕೂ'ಗುಟ್ಟುತ್ತಿರಲಿ
ನೀವಾ ನದಿಯ ಮೇಲೆ ದೋಣಿಗಳು ಮೆಲ್ಲಗೆ ಸಾಗುತ್ತಿರಲಿ.

೧೯೪೦



# ೨. 'ಸಂಜೆ' ('ವೇಚರ್')

## ೧. 'ಹ್ಯಾಮ್ಲೆಟ್' ಅನ್ನು ಓದಿ

ಸ್ಮಶಾನದ ಬಲಬದಿಗೊಂದು ಪಾಳುಜಾಗ
ಅದರ ಹಿಂಬದಿಗೆ ನೀಲಿಗೆ ತಿರುಗುತ್ತಿದ್ದ ನದಿ.
ನೀನಂದೆ – "ಹೋಗಿ ಯಾವದಾದರೂ ಕನ್ಯಾಶ್ರಮ ಸೇರಿಕೊ
ಇಲ್ಲವೇ ಯಾವನಾದರೂ ಹೆಡ್ಡನನ್ನು ಕಟ್ಟಿಕೊ ....."
ಹೌದು, ದೊರೆಮಕ್ಕಳು ಮಾತಾಡುವುದು ಹೀಗೆಯೇ.
ಆದರ ಆ ಮಾತು ನನ್ನ ನೆನಪಿನಲ್ಲಿ ಅಚ್ಚಳಿಯದೆ ಇದೆ –
ಅದು ಶತಶತಮಾನಗಳ ಕಾಲ ನಿರಂತರ
ನ್ಯಾಯದ 'ತುಪ್ಪಳದಂಗಿ'ಯಾಗಿ ನಿನ್ನ ಬೆನ್ನು ಹತ್ತಿ ಬರುತ್ತಿರಲಿ.

೧೯೦೯



## ೨. ಬೂದಲಗಣ್ಣಿನ ದೊರೆ

ಅವಿರತ ಯಾತನೆಯೆ, ನಿನ್ನ ಕೀರ್ತಿ ಬೆಳಗಲಿ !
ನಿನ್ನ ಆ ಬೂದಲಗಣ್ಣಿನ ದೊರೆಮಗ ತೀರಿಕೊಂಡ.

ಶರತ್ತಿನ ಕೆಂಪುಸಂಜೆ ಉಸಿರುಗಟ್ಟಿಸುತ್ತಿತ್ತು
ಮನೆಗೆ ಬಂದವನೇ ನನ್ನ ಗಂಡ ಶಾಂತವಾಗಿ ಹೇಳಿದ :

"ಕೇಳಿದೆಯಾ? ಬೇಟೆಗೆ ಹೋದವರು ಅವನನ್ನು ಹೊತ್ತು ತಂದರು
ಅವನ ಶವ ಪುರಾತನ ಓಕ್ ಮರದ ಬಳಿ ಕಣ್ಣಿಗೆ ಬಿತ್ತಂತೆ.

ಬಡಪಾಯಿ ರಾಣಿ ! ಇನ್ನೂ ಚಿಕ್ಕ ವಯಸ್ಸು
ಒಂದೇ ರಾತ್ರಿಯಲ್ಲಿ ಅವಳ ತಲೆ ಬೆಳ್ಳಗಾಗಿದೆ''.

ಹಾಗೆಂದವನೇ ಬೆಂಕಿಗೂಡಿನ ಮೇಲಿಂದ ಪೈಪೆತ್ತಿಕೊಂಡು
ಅವನು ರಾತ್ರಿಯ ಪಾಳಿಗೆ ಹೊರಟುಹೋದ.

ಮಲಗಿದ್ದ ನನ್ನ ಮಗಳನ್ನೆಬ್ಬಿಸುತ್ತೇನೆ
ಅವಳ ಬೂದಲಗಣ್ಣುಗಳನ್ನು ದೃಷ್ಟಿಸಿನೋಡುತ್ತೇನೆ.

ಕಿಟಕಿಯಾಚೆ ಪಾಪ್ಲರ್ ಮರಗಳು ಕಂಪಿಸುತ್ತವೆ :
"ನಿನ್ನ ದೊರೆಮಗ ಈಗ ಈ ಭೂಮಿಯ ಮೇಲಿಲ್ಲ''.

೧೯೧೦

೩

ಕಪ್ಪನೆಯ ಮೇಲುಹೊದಿಕೆಯಡಿ ಮುಷ್ಟಿ ಬಿಗಿಯುತ್ತೇನೆ
'ಇವೊತ್ತು ಮುಖವೇಕೆ ಬಿಳಚಿಕೊಂಡಿದೆ?'
ಏಕೆಂದರೆ ನಾನು ಅತೀವ ದುಃಖದಲ್ಲಿದ್ದೇನೆ
ಮತ್ತೇರುವವರೆಗೂ ಅವನಿಗೆ ಕಹಿಮದ್ಯ ಕುಡಿಸಿದ್ದಕ್ಕಾಗಿ.

ಹೇಗೆ ಮರೆಯಲಿ? ನೋವಿನಿಂದ ಬಾಯಿ ತಿರಿಚಿ
ಅವನು ತೂರಾಡುತ್ತ ಹೊರಹೋದದ್ದನ್ನು
ಕಟಕಟೆಯ ಆಸರೆ ಪಡೆಯದೆ ದಡದಡ ಮಹಡಿಯಿಳಿದು ಬಂದೆ
ಮುಂಬಾಗಿಲವರೆಗೂ ಅವನ ಹಿಂದೆ ಹಿಂದೆ ಓಡಿದೆ

ಏದುಸಿರು ಬಿಡುತ್ತ ಅರಚಿದೆ – "ತಮಾಷೆಗಾಗಿ
ಹಾಗೆ ಮಾಡಿದೆ, ಅಷ್ಟೆ ನೀ ಹೋದೆಯೋ ನಾ ಸತ್ತೆ".
ಶಾಂತ ಹಾಗೂ ಭೀಕರ ನಗೆ ನಗುತ್ತ ಅವನು
ಹೇಳಿದ – "ಒಳಹೋಗು, ಥಂಡಿಯ ಗಾಳಿಯಲ್ಲಿ ನಿಲ್ಲಬೇಡ".

೧೯೧೧

೪

ಬಾಗಿಲು ಅರ್ಧ ತೆರೆದಿದೆ
ಲಿಂಡನ್ ಮರಗಳಿಂದ ಬೀಸಿ ಬರುತ್ತಿದೆ, ಘಮಘಮ ಗಾಳಿ –
ಮೇಜಿನ ಮೇಲೆ ನೀನು ಬಿಟ್ಟುಹೋಗಿದ್ದಿ
ನಿನ್ನ ಟಡಿ, ಕೈಗವಸು.

ದೀಪ ಹಳದಿ ವರ್ತುಳ ರಚಿಸಿದೆ –
ಸಪ್ಪಳಕ್ಕೆ ಕಿವಿಗೊಡುತ್ತೇನೆ.
ನೀನು ಹೋದದ್ದು ಯಾಕೆಂದು
ನಾ ಕಾಣೆ –

ನಾಳೆ ಮುಂಜಾನೆ
ಬೆಳಕು, ಖುಷಿ.
ಈ ಬದುಕು ಭವ್ಯ
ತಿಳಿ, ಹೃದಯವೆ, ತಿಳಿ.

ನೀನು ತುಂಬ ದಣಿದಿದ್ದಿ
ಎಂತಲೇ ಮೆಲ್ಲಗೆ ಅಸ್ಪಷ್ಟವಾಗಿ ಬಡಿಯುತ್ತಿದ್ದೀಯೆ –
ನೀ ಬಲ್ಲೆ – ನಾನೆಲ್ಲೋ ಓದಿದ್ದೇನೆ
ಆತ್ಮಕ್ಕೆ ಮೃತ್ಯುವಿಲ್ಲ.

೧೯೧೧

೫

ಪೀಪಿ ಊದುವ ಹುಡುಗ
ಹಾರ ಕಟ್ಟುವ ಹುಡುಗಿ
ಕಾಡಿನಲ್ಲಿ ಇಬ್ಬರ ದಾರಿಗಳೂ ಸಂಧಿಸಿದವು
ದೂರದ ಬಯಲಲ್ಲೊಂದು ದೂರದ ಕಿರಣ –

ನನಗೆಲ್ಲ ಕಾಣುತ್ತಿದೆ, ಎಲ್ಲ ನೆನಪಿನಲ್ಲಿದೆ
ಎಲ್ಲವನ್ನೂ ಎದೆಯಲ್ಲಿ ಅಕ್ಕರೆಯಿಂದ ಕಾಪಾಡಿಕೊಂಡಿದ್ದೇನೆ.
ಆದರೆ ಒಂದು ಮಾತ್ರ ನನಗೆಂದೆಂದೂ ತಿಳಿಯುವುದಿಲ್ಲ
ಸದ್ಯಃ ಅದು ನೆನಪಿಗೂ ಬರುತ್ತಿಲ್ಲ.

ಬುದ್ಧಿ ಕೊಡು, ಬಲ ಕೊಡು ಎಂದು ನಾನು ಕೇಳುವುದಿಲ್ಲ
ಚಳಿಯಾಗುತ್ತಿದೆ – ಮೈ ಕಾಯಿಸಿಕೊಳ್ಳಲು ಒಂದಿಷ್ಟು
ಬೆಂಕಿ ಕೊಡು, ಸಾಕು! ರೆಕ್ಕೆಯಿದ್ದದ್ದೋ ಇಲ್ಲದ್ದೋ
ಇಲ್ಲಿ ನಗೆಮೊಗದ ಯಾವ ದೇವರೂ ನನ್ನನ್ನರಸಿ ಬರುವುದಿಲ್ಲ.

೧೯೧೧

೬

ಎದೆಯೊಳಗೆ ಸೂರ್ಯನ ನೆನಪು ಬತ್ತುತ್ತಿದೆ.
ಹುಲ್ಲು ಹಳದಿಯಾಗಿದೆ.
ಗಾಳಿ ಮೊದಲ ಹಿಮಕಣಗಳನ್ನು ಬೀಸಿ ತಂದಿದೆ
ಮೆಲ್ಲ ಮೆಲ್ಲಗೆ.

ಈಗ ಕಿರುಗಾಲುವೆಗಳಲ್ಲಿ ಹರಿವಿಲ್ಲ –
ನೀರು ಮಂಜುಗಟ್ಟಿದೆ.
ಇಲ್ಲಿ ಯಾವದೂ ಎಂದೆಂದೂ ಸರಿಯಾಗಿ ನಡೆಯುವುದಿಲ್ಲ –
ಓ, ಎಂದೆಂದೂ !

ವಿಲ್ಲೋ ಮರ ಖಾಲಿ ಆಕಾಶದೆದುರು ತನ್ನ ಪಾರದರ್ಶಕ
ಬೀಸಣಿಗೆ ಬಿಚ್ಚಿದೆ.
ಪ್ರಾಯಶಃ ನಾವು ನಿನ್ನ ಮಡದಿಯಾಗದಿದ್ದುದೇ
ಒಳ್ಳೆಯದಾಯಿತೇನೊ.

ಎದೆಯೊಳಗೆ ಸೂರ್ಯನ ನೆನಪು ಬತ್ತುತ್ತಿದೆ
ಏನಿದು ? ಆಗಲೇ ಕತ್ತಲೆಯೆ?
ಇರಬಹುದು. ಒಂದೇ ರಾತ್ರಿಯಲ್ಲಿ ಬಂದೆರಗಿತೇನೊ
ಥಂಡಿ !

೧೯೧೧

೭

ಮೇಲೆ ಆಕಾಶದಲ್ಲಿ ಬೂದುಮೋಡ
ಅಳಿಲಿನ ತುಪ್ಪಳದಂತೆ ಹರಡಿತ್ತು.
ಅವನಂದ – "ಏನೂ ಚಿಂತೆಯಿಲ್ಲ, ನಾಜೂಕಿನ ಹಿಮಕನ್ನಿಕೆ,
ಮಾರ್ಚಿಯಲ್ಲಿ ನಿನ್ನ ದೇಹ ಕರಗಿಹೋಗುತ್ತದೆ!"
ತೊಟ್ಟ ಗವಸಿನಡಿ ನನ್ನ ಕೈಗಳು ಮಂಜುಗಟ್ಟಿದವು.
ದಿಗ್ಭ್ರಾಂತಳಾದೆ, ಯಾವುದೂ ಅಶಾಂತಿ ಕವಿಯಿತು.
ಓ, ಸರಸರ ಉರುಳಿಹೋಗುವ ಉಳಿದ ವಾರಗಳಲ್ಲಿ
ಅವನ ಕ್ಷಣಿಕ, ವಾಯುಸದೃಶ ಪ್ರೀತಿಯನ್ನು ಹಿಂದಿರುಗಿಸುವುದಾದರೂ ಹೇಗೆ?
ನಾನೊಲ್ಲೆ : ದ್ವೇಷವೊಲ್ಲೆ, ಸೇಡೊಲ್ಲೆ.
ವರ್ಷದ ಕೊನೆಯ ಬೆಳ್ಳನೆಯ ಹಿಮಪಾತದೊಂದಿಗೆ ಸಾಯುವವಳು ನಾನು.
ಹಾಗೆಂದು ನನ್ನ ನಾಮಕರಣದ ದಿನವೇ ಕಣಿ ನುಡಿದಾಗಿದೆ.
ನಾನವನ ಇನಿಯಳಾದದ್ದು ಆಗಿನ್ನೂ ಜನವರಿಯಲ್ಲಷ್ಟೇ.

೧೯೧೧

## ೮. ಅನೆನ್ಸ್ಕಿಯ ಅನುಕರಣೆ

ನೀನು ನನ್ನ ಬಾಳಿನ ಮೊದಲ ಶೆವಲು
ನಿನ್ನಿಂದ ಬೀಳ್ಕೊಂಡಾಗ ಪೂರ್ವದಿಕ್ಕು ನೀಲಿಗೆ ತಿರುಗಿತ್ತು
'ನಾನೆಂದೆಂದಿಗೂ ಮರೆಯುವುದಿಲ್ಲ'ವೆಂದು ನೀನು ಹಾಗೆಯೇ ಮಾತಿಗೆ ಹೇಳಿದೆ
ನಾನು ಕೂಡಲೇ ನಿನ್ನನ್ನು ನಂಬಲಿಲ್ಲ.

ಎಷ್ಟೋ ಮುಖಗಳು ಹುಟ್ಟುತ್ತವೆ, ಮರೆಯಾಗುತ್ತವೆ
ಇವೊತ್ತು ಸವಿಯಾಗಿದ್ದದ್ದು ನಾಳೆ ದೂರವಾಗುತ್ತದೆ
ಆದರೆ ನಾನು ಆ ಪುಟದಲ್ಲೇ
ಹಿಂದೆಂದೋ ಮೂಲೆ ಮಡಿಚಿದ್ದೇಕೆ?

ಅಲ್ಲದೆ ಅದೆಷ್ಟು ವಿಚಿತ್ರ –
ಸದಾ ಆ ಪುಟದಲ್ಲೇ ಪುಸ್ತಕ ಏಕೆ ತೆರೆಯುತ್ತಿರುತ್ತದೆ,
ವಿದಾಯದ ಕ್ಷಣದಿಂದ ಏನೊಂದೂ
ಕೈಬಿಟ್ಟುಹೋಗಿ ಅತೀತದ ಅಂಶವಾಗಲಿಲ್ಲವೇನೋ ಎಂಬಂತೆ

ಹೃದಯ ಕಲ್ಲಿಂದಾದದ್ದು ಎಂದವರಿಗೆ
ಪ್ರಾಯಶಃ ಇದೂ ತಿಳಿದಿತ್ತೇನೊ – ಅದರ ಮೂಲದ್ರವ್ಯ ಬೆಂಕಿ
ನೀನು ಸುಮ್ಮನೆ ನನ್ನ ಬಳಿ ಇದ್ದೆಯಾ? ಇಲ್ಲವೇ
ನನ್ನನ್ನು ಪ್ರೀತಿಸುತ್ತಿದ್ದೆಯಾ ? – ಇಲ್ಲ, ಇದು ನನಗೆಂದೆಂದೂ ತಿಳಿಯುವುದಿಲ್ಲ.

೧೯೧೧

## ೯. ಒಲವು

ಹಾವಿನಂತೆ ಸರಸರ ಎದೆಯೇರಿ
ಅಲ್ಲಿ ಸುರುಳಿಸುತ್ತಿ ಕುಳಿತು ಮಾಟ ಮಾಡತೊಡಗುತ್ತದೆ
ಪಾರಿವಾಳದಂತೆ ಇಡೀ ದಿನ ಬೆಳಕಿಂಡಿಗಳ
ಅಂಚಿನಲ್ಲಿ ಕೂತು 'ಕೂ'ಗುಡುತ್ತಿರುತ್ತದೆ.

ಹಿಮಗಡ್ಡೆಯಂತೆ ಫಳಫಳ ಹೊಳೆಯುತ್ತಿರುತ್ತದೆ
ಗಿಲ್ಲಿ–ಹೂಗಳಂತೆ ಸದಾ ಅರೆನಿದ್ರೆಯಲ್ಲಿರುತ್ತದೆ ...
ಆದರೂ ಸುಖಶಾಂತಿಗಳಿಂದ ದೂರ
ನಿಷ್ಠೆಯಿಂದ ಗುಟ್ಟಾಗಿ ಕೈಹಿಡಿದು ನಡೆಸುತ್ತಿರುತ್ತದೆ.

ಪೀಟಲಿನ ಶೋಕತಪ್ತ ಪ್ರಾರ್ಥನಾಸ್ವರದಲ್ಲಿ
ಅದರ ಮಧುರ ಗದ್ಗದವನ್ನು ಕೇಳಬಹುದು
ಇನ್ನೂ ಅಪರಿಚಿತರಾದವರ ಮುಗುಳುನಗೆಯಲ್ಲಿ
ಅದನ್ನು ಗುರುತಿಸುವುದು – ಅಬ್ಬಾ, ಅದೆಷ್ಟು ಭೀಕರ!

೧೯೧೧



## ೩. 'ಜಪಮಾಲೆ' ('ಜ್ಯೋತ್ಸ್ನಿ')

೧೦

ನಾನೀಗ ತಿಳಿವಳಿಕೆಯ ಸಾದಾ ಬದುಕು ಬದುಕಲು ಕಲಿತಿದ್ದೇನೆ
ಆಕಾಶದತ್ತ ನೋಡುತ್ತೇನೆ, ದೇವರಿಗೆ ಮೊರೆಯಿಡುತ್ತೇನೆ
ಅನವಶ್ಯಕ ಆತಂಕ ದಣಿದು ಹೋಗಲೆಂದು
ಸಂಜೆಗೆ ಮುನ್ನ ತುಂಬ ಹೊತ್ತು ಓಡಾಡುತ್ತೇನೆ.

ಬೆಟ್ಟದ ಕಮರಿಗಳಲ್ಲಿ ಬರ್ಡಾಕ್‌ಮರ ಮರ್ಮರ ಮೊರೆಯುವ ಹೊತ್ತು,
ಬೆಟ್ಟ ಬೂದಿಮರದ ಹಳದಿಗೆಂಪಿನ ಹೂಗೊಂಚಲುಗಳು ಜೋತುಬೀಳುವ ಹೊತ್ತು,
ಈ ನಶ್ವರ – ನಶ್ವರ ಆದರೂ ಸುಂದರ – ಬದುಕನ್ನು ಕುರಿತು
ಗೆಲವಿನ ಕವನಗಳನ್ನು ತೋಡಿಕೊಳ್ಳುತ್ತೇನೆ.

ಮನೆಗೆ ಹಿಂದಿರುಗುತ್ತೇನೆ. ತುಪ್ಪುಳ–ಮೈಯ ಬೆಕ್ಕು
ಪರಪರಗುಟ್ಟುತ್ತ ಮೈಗೆ ಮೈತಾಗಿಸಿ ಕೂತು ನನ್ನ ಕೈ ನೆಕ್ಕುತ್ತದೆ.
ಕೊಳದ ಬದಿಯ ಮರಕೊಯ್ಯುವ ಕಾರ್ಖಾನೆಯ
ಶಿಖರದ ದೀಪ ಝುಗಝುಗ ಉರಿಯುತ್ತಿದೆ.

ಸೂರಿನ ಮೇಲೆ ಹಾರಿಬಂದು ಕುಳಿತ ಕೊಕ್ಕರೆಯೊಂದು
ಆಗಾಗ ಅರಚಿ, ರಾತ್ರಿಯ ಮೌನವನ್ನಿರಿಯುತ್ತದೆ.

ಈಗ ನೀನು ಬಂದು ಬಾಗಿಲು ತಟ್ಟಿದರೆ ಸಹ
ನನಗೆ ಕೇಳಿಸುವುದಿಲ್ಲ ಎಂದನಿಸುತ್ತದೆ.

೧೯೧೨

## ೧೧. ಸಂಜೆ

ಯಾವುದೊ ಅವ್ಯಕ್ತ ವ್ಯಥೆಯುಂತಿತ್ತು
ಉದ್ಯಾನದಲ್ಲಿನ ವಾದ್ಯದ ನಿನದ
ಮುಂದೆ ಶಟ್ಟೆಯಲ್ಲಿ ಐಸ್‌ನಲ್ಲಿಟ್ಟ ಆಯ್‌ಸ್ಟರ್‌ನಿಂದೆದ್ದಿತ್ತು
ಸಮುದ್ರದ ತಾಜಾ ತೀಕ್ಷ್ಣ ಗಂಧ.

ನಾನುಟ್ಟ ಲಂಗದ ಮೇಲೆ ಕೈಯಾಡಿಸುತ್ತ
ಅವನಂದ – "ನಾನು ನಿನ್ನ ನಚ್ಚಿನ ಗೆಳೆಯ".
ಅಪ್ಪುಗೆಯದಕ್ಕಿಂತ ಅದೆಷ್ಟು ಭಿನ್ನವಾಗಿತ್ತು
ಆ ಕೈಗಳ ಸ್ಪರ್ಶ.

ಹಕ್ಕಿಬೆಕ್ಕುಗಳ ಮೈನೇವರಿಸುವುದು ಹೀಗೆಯೇ
ಸುಂದರ ಮೈಗಟ್ಟಿನ ಕುದುರೆ–ಸವಾರಳತ್ತ ಕಣ್ಣಾಡಿಸುವುದು ಹೀಗೆಯೇ.
ಅವನ ಪ್ರಶಾಂತವಾದ ಕಣ್ಣುಗಳು ಮಾತ್ರ
ನಸುಬಂಗಾರಬಣ್ಣದ ರೆಪ್ಪೆಯಡಿ ನಗೆಸೂಸಿದ್ದವು

ಸುರುಳಿಸುರುಳಿಯಾಗೇಳುತ್ತಿದ್ದ ಹೊಗೆಯ ಹಿಂಬದಿಯಿಂದ
ಪಿಟೀಲಿನ ಶೋಕತಪ್ತ ಧ್ವನಿ ನುಡಿದಿತ್ತು :
"ಪ್ರಿಯತಮನೊಂದಿಗೆ ಇದು ನಿನ್ನ ಮೊದಲ ಏಕಾಂತ
ಆದಕ್ಕಾಗಿ ದೇವರಿಗೆ ಕೃತಜ್ಞಳಾಗಿರು."

೧೯೧೩

೧೨

ನೀ ಬಲ್ಲೆ, ನಾನು ಈ ಸೆರೆವಾಸದಿಂದ ಬೇಸತ್ತು
ದೇವರಲ್ಲಿ ಸಾವಿಗೆ ಮೊರೆಯಿಡುತ್ತಿದ್ದೇನೆ.
ಮನಸ್ಸು 'ತ್ವೆರ್'ನ ಬಡಭೂಮಿಯಲ್ಲಿ
ಬೆಂದು ಯಾತನೆಪಡುತ್ತಿದೆ.

ಅಲ್ಲಿಯ ಪುರಾತನ ಬಾವಿಗಳ ನೀರೆತ್ತುಗಗಳು
ಮೇಲೆ ಆಕಾಶದಲ್ಲಿ ಬೆಳ್ನೊರೆಯಂತೆ ಕಟ್ಟಿದ ಮೋಡ
ತೋಟಗಳಲ್ಲಿನ ಕಿರುಗುಟ್ಟುವ ಕಿರುಬಾಗಿಲುಗಳು
ರೊಟ್ಟಿಯ ಘಮ, ಬೇಸರಿಕೆ.

ಮತ್ತೆ, ಗಾಳಿಯ ದನಿ ಸಹ ಉಡುಗಿ ಹೋಗಿರುವ
ನಿರ್ವರ್ಣ ಪ್ರದೇಶಗಳು
ಬಿಸಿಲಿಗೆ ಮೈಕಂದಾದ ಶಾಂತಸ್ವಭಾವದ ಹೆಂಗಸರು
ಅವರ ದೋಷಾರೋಪಿಸುವ ಓರೆನೋಟಗಳು.

೧೯೧೩

೧೩

ನನ್ನನ್ನು ಎದುರುಗೊಳ್ಳಲು ಯಾರೂ
ಲಾಟೀನು ಹಿಡಿದು ಮೆಟ್ಟಲ ಮೇಲೆ ಕಾದಿರಲಿಲ್ಲ.
ಮನೆ ನಿಶ್ಶಬ್ದವಾಗಿತ್ತು. ಚಂಚಲ ಬೆಳುದಿಂಗಳಲ್ಲಿ
ನಾನೇ ಒಳಹೋದೆ.

ಹಸಿರು ದೀಪದ ಕೆಳಗೆ
ನೀರಸ ನಗೆ ನಗುತ್ತ
ಅವನು ಉಸುರಿದ : 'ಅದೆಷ್ಟು
ವಿಲಕ್ಷಣವಾಗಿದೆ ನಿನ್ನ ಧ್ವನಿ, ಸಿಂಡರೆಲಾ'.

ಬೆಂಕಿಯಗೂಡು ತಣ್ಣಗಾಗಿತ್ತು
ತಿತ್ತಿರಿಹುಳುಗಳು ಚಿರಗುಟ್ಟುತ್ತಿದ್ದವು
ಓ, ಯಾರೋ ನನ್ನ ಪುಟ್ಟ ಬಿಳಿಮೋಜುಗಳನ್ನು
ಸವಿನೆನಪಿಗಾಗಿ ಕದ್ದಿದ್ದಾರೆ

ಬದಲು ಕತ್ತೆತ್ತದೆ ನನ್ನ ಕೈಯಲ್ಲಿ
ಮೂರು ರಕ್ತಪುಷ್ಪಗಳನ್ನು ಇರಿಸಿಹೋಗಿದ್ದಾರೆ.
ಓ, ಮುದ್ದು ಪುರಾವೆಗಳೆ,
ನಿಮ್ಮನ್ನು ಎಲ್ಲಿ ಬಚ್ಚಿಡಲಿ?

ಕಹಿಯಾದ ಭಾವನೆ, ನಿಜ –
ಅವನು ಬೇಗ, ಬಹುಬೇಗ
ನನ್ನ ಪುಟ್ಟ ಬಿಳಿಮೋಜುಗಳನ್ನು
ಎಲ್ಲರ ಕಾಲಿಗೂ ತೊಡಿಸಿನೋಡುತ್ತಾನೇನೊ.

೧೯೧೩

೧೪

ಇಲ್ಲಿ ನಾವೆಲ್ಲರೂ ಕುಡುಕರು, ಸೂಳೆಯರು
ಹೇಗೆ ಒಟ್ಟಾಗಿ ಖುಷಿ ಕಳೆದುಕೊಂಡಿದ್ದೇವೆ!
ಗೋಡೆಯ ಮೇಲಿನ ಹೂಗಳೂ ಹಕ್ಕಿಗಳೂ
ಮೋಡಕ್ಕೆ ಹಂಬಲಿಸಿವೆ.

ನಿನ್ನ ಕರಿಯ ಪೈಪಿಂದ
ವಿಲಕ್ಷಣವಾಗಿ ಹೊಗೆ ಮೇಲೇಳುತ್ತಿದೆ.
ನಾನು ಕಿರಿದಾದ ಲಂಗ ತೊಟ್ಟಿದ್ದೇನೆ –
ಅಂಗಸೌಷ್ಠವ ಎದ್ದುಕಾಣಲೆಂದು.

ಕಿಟಕಿಬಾಗಿಲುಗಳನ್ನು ಬಡಿದುಮುಚ್ಚಿದ್ದಾರೆ
ಅವುಗಳಾಚೆ ಏನು ತುಂತುರೆ? ಭೋರ್ಮಳೆಯೆ?
ಜಾಗರೂಕ ಬೆಕ್ಕಿನ ಕಣ್ಣನ್ನು ಹೋಲುತ್ತಿವೆ
ನಿನ್ನ ಕಣ್ಣುಗಳು.

ಓ, ನನ್ನೆದೆ ದುಃಖದಿಂದ ಒತ್ತುತ್ತಿದೆ!
ಏನು, ನಾನು ನನ್ನ ಸಾವಿನ ಗಳಿಗೆಗೆ ಕಾಯುತ್ತಿದ್ದೇನೆಯೆ?
ಆದರೆ ಅಲ್ಲಿ ಕುಣಿದಿದ್ದಾಳಲ್ಲ, ಆ ಹೆಣ್ಣು
ಅವಳಂತೂ ನರಕಾಗ್ನಿಯಲ್ಲಿ ಬೇಯುವುದು ಖಂಡಿತ.

೧೯೧೩

## ೧೫. ಅತಿಥಿ

ಎಲ್ಲ ಎಂದಿನಂತೆಯೇ ಇದೆ : ಊಟದ ಮನೆಯ ಕಿಟಕಿಯ ಮೇಲೆ
ಹಿಮದೆರಚಲು ಬಡಿಯುತ್ತಿದೆ
ನಾನು ಬದಲಾಗಿಲ್ಲ.
ಒಮ್ಮೆ ಒಬ್ಬಾತ ನನ್ನ ಬಳಿ ಬಂದ.

ನಿನಗೇನು ಬೇಕೆಂದು ಕೇಳಿದೆ?
"ನಿನ್ನೊಂದಿಗೆ ನರಕದಲ್ಲಿರಬಯಸುತ್ತೇನೆ" ಅಂದ
ನಗುಬಂತು. "ಹೌದು, ನಾನು ಮುಂಗಾಣಬಲ್ಲೆ
ನೀನು ನಮ್ಮಿಬ್ಬರಿಗೂ ಕೇಡು ತರುತ್ತಿ".

ಅವನು ತನ್ನ ಬಡಕಲ ಕೈಗಳನ್ನೆತ್ತಿ
ಮುಂದಿದ್ದ ಹೂಗಳನ್ನು ಮೃದುವಾಗಿ ನೇವರಿಸಿದ –
"ಹೇಳು, ನೀನು ಹೇಗೆ ಮುತ್ತಿಡುತ್ತಿ?
ನಿನಗೆ ಹೇಗೆ ಮುತ್ತಿಡುತ್ತಾರೆ?"

ಮಂಕುನೋಟ ಬೀರುತ್ತ ಅವನ ಕಣ್ಣುಗಳು
ನನ್ನ ಬೆರಳುಂಗುರವನ್ನೇ ದೃಷ್ಟಿಸಿನೋಡುತ್ತಿದ್ದವು
ಅವನ ದುಷ್ಟಮುಖ ಹೊಳೆಯುತ್ತಿತ್ತು
ಅಲ್ಲಿ ಒಂದಾದರೂ ಸ್ನಾಯು ಅಲುಗಿರಲಿಲ್ಲ

ನಾ ಬಲ್ಲೆ – ಎಲ್ಲವನ್ನೂ ಉತ್ಕಟತೆಯಿಂದ
ಆತ್ಮೀಯವಾಗಿ ತಿಳಿಯುವುದೆಂದರೆ ಅವನಿಗೆ ಖುಷಿ
ಅವನಿಗೆ ಏನೊಂದೂ ಬೇಕಿಲ್ಲ
ಕೇಳಿದರೆ ನಾನು ಇಲ್ಲವೆನ್ನುವವಳೂ ಅಲ್ಲ

೧೯೧೪



## ೪. 'ಬೆಳ್ಳಕ್ಕಿ ಹಿಂಡು' ('ಬೇಲಯಾ ಸ್ತಾಯಾ')

೧೬

ಅವನಲ್ಲಿ ಅಸೂಯೆ, ಆತಂಕಗಳು ತುಂಬಿದ್ದವು, ಅಷ್ಟೇ ಅಕ್ಕರೆ ಸಹ.
ದೇವರ ಸೂರ್ಯ ಪ್ರೀತಿಸುವಂತೆ ಅವನು ನನ್ನನ್ನು ಪ್ರೀತಿಸಿದ್ದ
ಹಿಂದಿನದನ್ನು ನೆನಸಿಕೊಂಡು ನನ್ನ ಬೆಳ್ಳಕ್ಕಿ ಹಾಡಬಾರದೆಂದು
ಅವನು ಅದನ್ನು ಕೊಂದುಹಾಕಿದ.

ಆ ಸಂಜೆ ನಾನಿದ್ದ ಮುಂಗೋಣೆಗೆ ಬಂದು ಅವನು ಹೇಳಿದ :
"ನನ್ನನ್ನು ಪ್ರೀತಿಸು, ನಗುನಗುತ್ತಿರು, ಕವಿತೆ ಬರಿ"
ದೂರ, ದುಂಡುಬಾವಿಯಾಚೆ, ಪುರಾತನ ಆ್ಯಲ್ಡರ್ ಮರದ ಕೆಳಗೆ
ನನ್ನ ಹಸನ್ಮುಖಿ ಹಕ್ಕಿಯನ್ನು ಹೂತು ಬಂದೆ.

ಮುಂದೆಂದೂ ಅಳುವುದಿಲ್ಲವೆಂದು ಅವನಿಗೆ ಮಾತುಕೊಟ್ಟೆ
ಆದರೆ ನನ್ನೆದೆ ಕಲ್ಲಾಯಿತು
ಈಗ ಎಲ್ಲೆಲ್ಲೂ, ಯಾವಾಗಲೂ ಆ ಹಕ್ಕಿಯ
ಇನಿದನಿಯೇ ಕೇಳಿಬರುತ್ತಿದೆಯೆನಿಸುತ್ತದೆ.

೧೯೧೪

೧೭

“ಎಲೆ ಘನವಂತ ಹೆಣ್ಣೆ, ಕಪ್ಪುಶಾಲಿನಡಿ ಅಳುತ್ತಿರುತ್ತಿದ್ದ
ಆ ನಿನ್ನ ಜಿಪ್ಸಿ ಮಗುವೆಲ್ಲ?
ಎಲ್ಲ, ಆ ನಿನ್ನ ಚೊಚ್ಚಲಮರಿ?
ಅದರ ಬಗ್ಗೆ ನೀನೇನು ಬಲ್ಲೆಯ? ಎಷ್ಟು ನೆನಪಿದೆಯೆ?”

“ತಾಯಿಯ ಪಾಡೊಂದು ಸಂತಸದ ಹಿಂಸೆ
ಅದಕ್ಕೆ ನನಗೆ ಅರ್ಹತೆಯಿರಲಿಲ್ಲ.
ಎಂತಲೇ ಶ್ವೇತಸ್ವರ್ಗದ ಕಿಬ್ಬಾಗಿಲು ತೆರೆದುಕೊಂಡಿತು
ಮೇರಿ ಮಾಗ್ದಲೀನ್ ನನ್ನ ಪುಟ್ಟಕಂದನನ್ನು ಕರೆದುಕೊಂಡಳು.

ನನ್ನ ಒಂದೊಂದು ದಿನವೂ ಹೇಗೋ ಖುಷಿಯಿಂದ ಕಳೆದುಹೋಗುತ್ತಿದೆ
ಒಂದು ದೀರ್ಘವಸಂತದಲ್ಲಿ ನನ್ನನ್ನು ನಾನು ಕಳೆದುಕೊಂಡಿದ್ದೇನೆ
ಆದರೆ ನನ್ನ ಕೈಗಳು ಮಾತ್ರ ಆ ಇಲ್ಲದ ಭಾರವನ್ನು ಬಯಸಿವೆ
ನಿದ್ರೆಯಲ್ಲಿ ನನ್ನ ಮಗು ಅಳುವುದೊಂದು ಕೇಳುತ್ತದೆ.

ಎದೆ ಆತಂಕದಿಂದ ನಿಶ್ಚೇಷ್ಟವಾಗುತ್ತದೆ
ಆಮೇಲೆ ಒಂದೂ ನೆನಪಿಗೆ ಬರುವುದಿಲ್ಲ
ಸುಮ್ಮನೆ ಕತ್ತಲಕೋಣೆಯಲ್ಲಿ ಅಲೆದಾಡುತ್ತೇನೆ
ಸದಾ ಅದರ ಪುಟ್ಟ ತೊಟ್ಟಿಲನ್ನರಸುತ್ತ.”

೧೯೧೪

## ೧೮. ಏಕಾಂತ

ನನ್ನತ್ತ ತೂರಿಬಂದ ಕಲ್ಲುಗಳು ಅವೆಷ್ಟೋ.
ಅವುಗಳಲ್ಲಿ ಹೊಸಭೀತಿ ಹುಟ್ಟಿಸುವಂತಹದು ಒಂದಾದರೂ ಇಲ್ಲ.
ಇಲ್ಲೊಂದು ಅತ್ಯಂತ ಎತ್ತರದ ಕಟ್ಟಡವಿದೆ
ಎಂತಹ ಅಚ್ಚುಕಟ್ಟಾದ ಪಂಜರ ಅದು.
ಅದನ್ನು ಕಟ್ಟಿದವರಿಗೆ ನಾನು ಕೃತಜ್ಞ –
ದುಃಖಕಷ್ಟಗಳು ಆ ಪುಣ್ಯಾತ್ಮರನ್ನು ತಾಗದಿರಲಿ !
ಇಲ್ಲಿಂದ ದಿನದ ಪ್ರಥಮ ಪ್ರಭಾತ ಕಾಣಿಸುತ್ತದೆ
ಮತ್ತ ಸಂಜೆಸೂರ್ಯನ ಕೊನೆಯ ಕಿರಣಗಳು ವೈಭವಿಸುತ್ತವೆ.
ಆಗಾಗ್ಗೆ ನನ್ನ ಕೋಣೆಯ ಕಿಟಕಿಯೊಳಗಿನಿಂದ
ಉತ್ತರ ಸಮುದ್ರಗಳ ಗಾಳಿ ಬೀಸಿಬರುತ್ತದೆ
ಪಾರಿವಾಳವೊಂದು ಬಂದು ನನ್ನ ಕೈಯಿಂದ ಗೋದಿಯ ಕಾಳು ತಿನ್ನುತ್ತದೆ ...
ವಾಗ್ದೇವಿಯ ನೀಲಹಸ್ತ
– ಓ ಅದೆಷ್ಟು ದಿವ್ಯ, ಹಗುರ ಹಾಗೂ ಶಾಂತ –
ಬರೆಯದೆ ಉಳಿದ ಪುಟಗಳನ್ನು ಬರೆದು ಮುಗಿಸುತ್ತದೆ.

೧೯೧೪



೧೯

ಕಡಲತಡಿಯ ತೋಟದ ದಾರಿ ಕತ್ತಲಿಗೆ ತಿರುಗುತ್ತಿದೆ
ದಾರಿದೀಪಗಳು ಹೊಸವು, ಹಳದಿಗಿವೆ.
ನಾನು ತೆಪ್ಪಗಿದ್ದೇನೆ.  ನನ್ನೊಂದಿಗೆ
ಅವನ ಮಾತೆತ್ತಬೇಡ, ಅಷ್ಟೆ :
ನೀನು ಪ್ರಿಯ, ವಿಶ್ವಾಸಪಾತ್ರ, ನಾವು ಸ್ನೇಹದಿಂದಿರೋಣ ....
ಒಟ್ಟಿಗೆ ಓಡಾಡೋಣ, ಮುತ್ತಿಡೋಣ, ಮುಪ್ಪು ಕಾಣೋಣ
ಮೇಲಿನ ಹಿಮತಾರೆಗಳಂತೆ
ತಿಂಗಳ ಮೇಲೆ ತಿಂಗಳು ಸಲೀಸಾಗಿ ಉರುಳಿಹೋಗುತ್ತದೆ.

೧೯೧೪

## ೨೦. ಜುಲೈ ೧೯೧೪ : ಎರಡು ಕವಿತೆಗಳು

೧

ಸುಟ್ಟನಾತ. ನಾಲ್ಕುವಾರದಿಂದ ಒಂದೇ ಸಮನೆ
ಜೌಗುನೆಲದಲ್ಲಿ ಒಣಎಲೆಯ ಉರುವಲು ಉರಿಯುತ್ತಿದೆ.
ಇವೊತ್ತು ಹಕ್ಕಿಗಳೂ ಚಿಲಿಪಿಲಿಸುತ್ತಿಲ್ಲ
ಆ್ಯಸ್ಪ್ ಮರ ಅಲುಗಾಡದೆ ನಿಂತಿದೆ.

ದೇವರಿಗೆ ಅಪಮಾನವೆಂಬಂತೆ ಉರಿದಿದ್ದಾನೆ ಸೂರ್ಯ
ಈಸ್ಟರ್‌ನಿಂದೀಚೆಗೆ ಹೊಲಬಯಲು ಮಳೆಕಂಡಿಲ್ಲ.
ಒಂಟಿಗಾಲಿನ ದಾರಿಹೋಕನೊಬ್ಬ ಹೋಗುಹೋಗುತ್ತ
ಬಾಗಿಲ ಬಳಿ ನಿಂತು ಕಣಿ ನುಡಿದುಹೋದ :

"ಕೆಟ್ಟಕಾಲ ಹತ್ತಿರ ಬರುತ್ತಿದೆ. ಬಹುಬೇಗ
ಈ ನೆಲ ಹೊಸ ಹೊಸ ಗೋರಿಗಳಿಂದ ಕಿಕ್ಕಿರಿಯಲಿದೆ.
ನೋಡುವಿಯಂತೆ, ಕ್ಷಾಮಡಾಮರಗಳು ಅಸಂಖ್ಯ ಮರಣಗಳು
ಸೂರ್ಯಚಂದ್ರಾದಿಗಳ ಗ್ರಹಣ – ಎಲ್ಲ ಆಗಲಿದೆ.

ಆದರೆ ಇಷ್ಟು ನಿಜ : ಶತ್ರುವಿಗೆ ತನ್ನ ಖುಷಿಗಾಗಿ
ಈ ನಮ್ಮ ನೆಲವನ್ನು ತುಂಡರಿಸಲಾಗುವುದಿಲ್ಲ
ದೇವಮಾತೆ ಮೇರಿ ನಮ್ಮೆಲ್ಲ ದುಃಖಕಷ್ಟಗಳ ಮೇಲೆ
ತನ್ನ ಶ್ವೇತವಸನ ಹರಡಿ ಕಾಪಾಡುತ್ತಾಳೆ."

೨

ಉರಿವ ಕಾಡುಗಳಿಂದ ಜೂನಿಪರ್ ಮರದ
ಸಿಹಿವಾಸನೆ ಬೀಸಿ ಬರುತ್ತಿದೆ
ಸಿಪಾಯಿಗಳ ಹೆಂಡಂದಿರು ಮಕ್ಕಳನ್ನಪ್ಪಿ ಗೋಳಿಡುತ್ತಿದ್ದಾರೆ
ಹಳ್ಳಿಯ ಹಾದಿಬೀದಿಗಳು ವಿಧವೆಯರ ಪ್ರಲಾಪದಿಂದ ಮೊರೆಯುತ್ತಿವೆ

ಭೂಮಿ ಮಳೆಗಾಗಿ ಹಾತೊರೆದಿದೆ
ಆದರೆ ನಮ್ಮೆಲ್ಲ ಪ್ರಾರ್ಥನೆಗಳೂ ವ್ಯರ್ಥ –
ತುಳಿದಾಡಿ ಹಾಳೆದ್ದ ಹೊಲ ಕಾಣುವುದು
ಬೆಚ್ಚನೆಯ ಕಣ್ಣೀರ ಸೇಚನೆಯನ್ನಷ್ಟೇ.

ಶೂನ್ಯ ಆಕಾಶ ಕೆಳಬಾಗಿದೆ
ದೈನ್ಯದಿಂದ ಮೊರೆಯಿಡುತ್ತಿದ್ದ ಧ್ವನಿ ಸ್ತಬ್ಧ
"ಅಯ್ಯೋ, ನೀನು ತೊಟ್ಟ ಅಂಗಿಯಲ್ಲಿ ಪಾಲು ಪಡೆಯಲು
ಆ ಜನ ನಿನ್ನ ಅತಿ ಪವಿತ್ರ ದೇಹವನ್ನು ಹೇಗೆ ಘಾಸಿಗೊಳಿಸಿದರು''.

೨೦ ಜುಲೈ ೧೯೧೪

೨೧

ಪ್ರಚಂಡ ನೀವಾನದಿಯ ಬದಿಯ ಮಬ್ಬುಗತ್ತಲ ನಗರ
ನನ್ನ ಬಾಲ್ಯದ ಹರಕೆಯ ತೊಟ್ಟಿಲು
ಬಾಲ–ದೇವದೂತರು
ಹೂಮಾಲೆಗಳಿಂದ ಎತ್ತಿಹಿಡಿದ
ನನ್ನ ನಿಷೇಕಪ್ರಸ್ತದ ಪವಿತ್ರ ಸೆಜ್ಜೆ ಅದು –
ನಮ್ಮೆಲ್ಲರ ಕಠೋರ ಪ್ರೀತಿಗೆ ಪಾತ್ರವಾದ ನಗರ

ನಿಷ್ಠುರ, ಪ್ರಶಾಂತ, ಹಿಮಾಚ್ಛಾದಿತ –
ಅದು ನನ್ನ ಪ್ರಾರ್ಥನೆಯ ಪೀಠ
ನನ್ನ ಪ್ರಿಯತಮ ಮೊದಲು ಭೇಟಿಯಾದದ್ದು,
ಬದುಕಿಗೆ ದಾರಿದೀಪವಾದದ್ದು ಅಲ್ಲಿಯೇ
ದೇವಿ, ಶೋಕಮಯಿ ಕವಿತೆ, ಕುರುಡರನ್ನು ನಡಸಿದಂತೆ
ನನ್ನ ಕೈಹಿಡಿದು ನಡಸಿದ್ದೂ ಅಲ್ಲಿಯೇ.

೧೯೧೪

೨೨

ನೀನು ಬದುಕಿದ್ದೀಯಾ, ಸತ್ತಿದ್ದೀಯಾ — ಒಂದೂ ತಿಳಿಯದು
ನಿನ್ನನ್ನು ಈ ಭೂಮಿಯ ಮೇಲೆ ಹುಡುಕಿ ಪಡೆಯಬಹುದ?
ಅಥವಾ ಸಂಜೆಯ ಧ್ಯಾನದಲ್ಲಿ ಸತ್ತವರ ಬಗ್ಗೆ
ನಿರ್ಮಲಚಿತ್ತದಿಂದ ಸಂತಾಪ ಪಡುವಾಗಲೊ ?

ಈ ಎಲ್ಲವೂ ನಿನಗೇ : ದಿನವಿಡಿಯ ಪ್ರಾರ್ಥನೆ
ರಾತ್ರಿಯ ನಿದ್ರಾಹೀನ, ನಿಶ್ಚೇಷ್ಟ ಅವಸ್ಥೆಯಲ್ಲಿನ ಮೈಬಿಸಿ
ನನ್ನ ಕವಿತೆಸಾಲುಗಳ ಬೆಳ್ಳಕ್ಕಿ ಹಿಂಡು
ನನ್ನ ಕಂಗಳ ನೀಲಿಯುರಿ.

ನನಗೆ ನಿನ್ನಷ್ಟು ಆಪ್ತರಾದವರು ಯಾರೂ ಇರಲಿಲ್ಲ
ಯಾರೂ ಹೀಗೆ ಕಾಡಿಸಿಯೂ ಇರಲಿಲ್ಲ —
ನನ್ನನ್ನು ಯಾತನೆಗೆ ಗುರಿಮಾಡಿದವನು ಸಹ
ಮುದ್ದಿಸಿ ಮರೆತವನು ಸಹ.

೧೯೧೫

೨೩

ಇನ್ನೆಲ್ಲೋ ಬದುಕು ಬೆಳಕಿನಿಂದ ತುಂಬಿ ಬೆಚ್ಚಗೆ,
ತಿಳಿಯಾಗಿ, ಹಗುರಾಗಿ ಖುಷಿಕೊಡುತ್ತಿದೆ ...
ಅಲ್ಲಿ ಸಂಜೆ ಒಬ್ಬ ಹುಡುಗ ನೆರೆಹುಡುಗಿಯೊಂದಿಗೆ
ಬೇಲಿಯ ಮೇಲಿಂದ ಮಾತಾಡುತ್ತಿದ್ದಾನೆ –
ದುಂಬಿಗಳಿಗಷ್ಟೇ ಕೇಳಿಸುವ ಮುದ್ದುಮಾತುಗಳವು.

ಇಲ್ಲಿ ನಾವೋ ದುರ್ಧರ ಬದುಕನ್ನು ವೈಭವದಿಂದ ಬದುಕುತ್ತಿದ್ದೇವೆ
ನಮ್ಮ ಅಪ್ರಿಯ ಭೇಟಿಗಳನ್ನು ಧಾರ್ಮಿಕಕ್ರಿಯೆಯೆಂಬಂತೆ ಉತ್ಸವಿಸಿದ್ದೇವೆ
ಇನ್ನೂ ಷುರು ಮಾಡುವುದಕ್ಕಿಲ್ಲ, ಜೋರುಗಾಳಿ ಬೀಸಿ
ನಮ್ಮ ಮಾತನ್ನು ತುಂಡರಿಸುತ್ತದೆ.

ಆದರೂ ಕೀರ್ತಿದೌರ್ಭಾಗ್ಯಗಳ ನಮ್ಮ ಈ ಭವ್ಯ ಶಿಲಾನಗರವನ್ನು,
ಅದರ ವಿಶಾಲ ನದಿಕಾಲುವೆಗಳನ್ನು, ಥಳಥಳಿಸುವ ಮಂಜನ್ನು,
ಬೆಳಕು ಕಾಣದ ಕತ್ತಲ ತೋಟಗಳನ್ನು,
ಅಲ್ಲಿಯ ಅಸ್ಪಷ್ಟ ಕವಿತಾಧ್ವನಿಯನ್ನು
ಯಾತರೊಂದಿಗೂ ವಿನಿಮಯಮಾಡಿಕೊಳ್ಳಲು ನಾವು ಸಿದ್ಧರಿಲ್ಲ.

೧೯೧೫

೨೪

ಕಗ್ಗತ್ತಲು, ದುಃಖ. ಆದರೂ ದಾರಿ ಬೆಳಕಾಗಿದೆ.
— ಅನೆನ್‌ಸ್ಕಿ

ನಾವು ಬಿಕಾರಿಗಳು, ನಮ್ಮಲ್ಲಿ ಏನೂ ಇಲ್ಲ — ಎಂದುಕೊಂಡಿದ್ದೆವು
ಆದರೆ ಒಂದರ ಮೇಲೊಂದರಂತೆ ಇದ್ದುದೆಲ್ಲವನ್ನೂ ಕಳೆದುಕೊಳ್ಳುತ್ತ ಹೋದಂತೆ
ನಮ್ಮ ಪಾಲಿಗೆ ಒಂದೊಂದು ದಿನವೂ
ನೆನಪಿನ ದಿನವಾಗತೊಡಗಿತು —
ಆಗ ನಾವು ಹಿಂದೆ ನಮಗಿದ್ದ ಅಷ್ಟೈಶ್ವರ್ಯಕ್ಕಾಗಿ
ದೇವರ ಅಪಾರ ಕರುಣೆಯನ್ನು ಹೊಗಳಿ
ಹಾಡತೊಡಗಿದೆವು.

೧೯೧೫

## ೨೫. ಮೊರೆ

ರೋಗರುಜಿನಗಳ ಕರಾಳದಿನಗಳನ್ನು ಕೊಡು
ಉಸಿರುಗಟ್ಟಿಸುವ ನಿದ್ರಾಹೀನತೆ, ಜ್ವರ ನನಗಿರಲಿ
ಈ ನನ್ನ ಕಂದನನ್ನು ತೂಗೊ, ಪ್ರಿಯಕರನನ್ನು ತೂಗೊ
ಗೀತರಚನೆಯ ರಹಸ್ಯಮಯ ವರಪ್ರಸಾದವನ್ನೂ ಹಿಂತೆಗೆದುಕೊ –
ಬದಲು, ನಾಡಿನ ಮೇಲೆ ಮುತ್ತಿರುವ ಕಾರ್ಮೋಡಗಳನ್ನು
ಸೂರ್ಯಕಾಂತಿಯಲ್ಲಿ ಬೆಳಗುವ ಸುವರ್ಣ ಮೇಘಮಾಲೆಯನ್ನಾಗಿಸು
– ಇದೂ, ಹೀಗೆಂದು ನಿನ್ನ ಪ್ರಾರ್ಥನೆಯ ವೇಳೆ ಮೊರೆಯಿಟ್ಟದ್ದೇನೆ
ಅಸಂಖ್ಯ ದಣಿವಿನ ದಿನಗಳನ್ನು ಕಂಡು ಪಾಡುಪಟ್ಟ ನಾನು.

೧೯೧೫

೨೬

ಶಬ್ದಗಳ ತಾಜಾತನ, ಭಾವನೆಗಳ ಸರಳತೆ –
ನಾವು ಇವನ್ನು ಕಳೆದುಕೊಳ್ಳುವುದು
ಕಲಾವಿದ ಕಣ್ಣನ್ನು, ನಟ ಧ್ವನಿಚಲನೆಗಳನ್ನು
ಹೆಣ್ಣು ಚೆಲುವನ್ನು ಕಳೆದುಕೊಂಡಂತಲ್ಲವೆ?

ಆದರೆ ದೈವದತ್ತವಾದ ಪ್ರತಿಭೆಯನ್ನು
ನಿನ್ನ ಸ್ವಂತಕ್ಕಾಗಿಯೇ ಉಳಿಸಿಕೊಳ್ಳುವುದು ಬೇಡ :
ನಾವೆಲ್ಲ ಬಲ್ಲೆವು – ಇಟ್ಟು ಕೂಡಿಸುವ ಬದಲು
ಪೋಲುಮಾಡುವುದು ನಮಗೆ ಸಿಕ್ಕ ಶಾಪವೆಂದು.

ಒಬ್ಬನೇ ಹೊರಬಾ, ಕುರುಡರ ಕಣ್ಣಿನ ಪೊರೆಕಳೆ
ಆಗ ನೋಡು, ತಿಳಿಯುತ್ತದೆ – ಆಪತ್ತಿನ ಅನಿಶ್ಚಿತ ವೇಳೆ
ನಿನ್ನ ಅನುಯಾಯಿಗಳೇ ನಿನ್ನನ್ನು ಹೇಗೆ ಆಡಿಕೊಂಡು ಉಬ್ಬುತ್ತಿರುತ್ತಾರೆಂದು
ಮಂದಿ ಅದೆಷ್ಟು ಉದಾಸೀನರಾಗಿರುತ್ತಾರೆಂದು.

೧೯೧೫

೨೭

ಅಲ್ಲ, ದೊರೆ, ನೀನು ನನ್ನಲ್ಲಿ
ಕಾಣಬಯಸುತ್ತಿರುವವಳು ನಾನಲ್ಲ
ನನ್ನ ತುಟಿಗಳು ಮುತ್ತಿಡದೆ ಅದೆಷ್ಟೋ ಕಾಲವಾಯಿತು
ಈಗ ಅವು ಕಣಿ ನುಡಿದಿವೆ.

ಬುದ್ಧಿವಿಕಲ್ಪದಿಂದಲೋ
ದುಃಖದ ಭಾರಕ್ಕೋ
ಹೀಗೆ ಒದರುತ್ತಿದ್ದೇನೆಂದುಕೊಳ್ಳಬೇಡ –
ಅದು ನನ್ನ ವೃತ್ತಿ.

ದಾರಿಹೋಕಳೊಬ್ಬಳು ಚೆನ್ನಾಗಿ ಕಂಡಳೆಂದು
ಅವಳನ್ನು ಮನೆಗೆ ಕರೆತಂದು ಪಳಗಿಸತೊಡಗಿದರೆ
ಎಂಥ ಅನರ್ಥವಾಗುವುದೆಂದು
ನಾನು ನಿನಗೆ ತಿಳಿಸಿಕೊಡಬಲ್ಲೆ.

ಏನು, ನಿನಗೆ ಕೀರ್ತಿಯ ಹಂಬಲವೆ? – ಹಾಗಾದರೆ
ನನ್ನ ಬುದ್ಧಿವಾದ ಕೇಳು
ಇಷ್ಟೇ – ಅದೊಂದು ಜಾಲ
ಅಲ್ಲಿ ಸುಖವಿಲ್ಲ, ಬೆಳಕಿಲ್ಲ.

ನೀನೀಗ ಮನೆಗೆ ನಡಿ
ನಾವು ಕೂಡಿದ್ದೆವೆಂಬುದನ್ನು ಮರೆತುಬಿಡು
ನಿನ್ನ ಪಾಪಕ್ಕೆ ನಾನು
ದೇವರಿಗೆ ಉತ್ತರಕೊಟ್ಟುಕೊಳ್ಳುತ್ತೇನೆ, ಪ್ರಿಯ.

೧೯೧೫

೨೮

ನಾ ಬಲ್ಲೆ : ವರ್ಷಗಳ ನೋವು ಹಾಗೂ ಕಷ್ಟನಿಷ್ಠುರಗಳಿಗೆ
ನನಗೆ ದೊರೆತ ಬಹುಮಾನ ನೀನು –
ಎಂದೂ ಈ ನೆಲದ ಸುಖಸಂತೋಷಗಳಿಗೆ
ಮೈತೆರೆಯದಿದ್ದುದಕ್ಕೆ,
ಪ್ರಿಯತಮನಿಗೂ 'ನೀನು ನನಗೆ ಪ್ರಿಯ'
ಎಂದು ಹೇಳದಿದ್ದುದಕ್ಕೆ,
ಎಲ್ಲರನ್ನೂ ಎಲ್ಲದಕ್ಕೂ ಮನ್ನಿಸಿದ್ದಕ್ಕೆ
ಇನ್ನು ಮುಂದೆ ನೀನೇ ನನ್ನ ದೇವತಾಪುರುಷ.

೧೯೧೬

೨೯

ಬಾವಿಯಾಳದಲ್ಲಿ ಬಿದ್ದಿರುವ ಬಿಳಿಯ ಕಲ್ಲಿನಂತೆ
ನನ್ನೊಳಗೆ ತಳವೂರಿದೆ ಒಂದು ನೆನಪು.
ನನಗೆ ಆದರೊಂದಿಗೆ ಹೋರಾಡುವ ಶಕ್ತಿಯೂ ಇಲ್ಲ, ಇಚ್ಛೆಯೂ ಇಲ್ಲ :
ಅದು ದುಃಖವೂ ಹೌದು, ಸುಖವೂ ಹೌದು.

ನನ್ನನ್ನು ಹತ್ತಿರದಿಂದ ನೋಡಿದವರಿಗೆ
ಅದರ ಗುರುತು ಸಿಗುವುದೇನೊ.
ಹಾಗೆ ನೋಡಿದವರು ಅತಿ ದುರಂತ ಕತೆಯೊಂದನ್ನು ಕೇಳಿದಾಗಿನದಕ್ಕಿಂತ
ಹೆಚ್ಚು ದುಃಖಿಗಳೂ ಚಿಂತಾಕ್ರಾಂತರೂ ಆಗುವುದು ಖಂಡಿತ.

ನಾ ಬಲ್ಲೆ – ದುಃಖವೆಂಬ ಅದ್ಭುತ ಸದಾಕಾಲ ಇರಲೆಂದೇ
ದೇವರು ಮನುಷ್ಯನ ಪ್ರಜ್ಞೆ ಕೊಲ್ಲದೆಯೇ
ಅವನ ರೂಪ ಬದಲಾಯಿಸಿದ –
ಎಂತಲೇ ನೀನೀಗ ನನ್ನ ನೆನಪಾಗಿ ರೂಪತಾಳಿದ್ದೀಯೆ.

೧೯೧೬

೩೦

ಸುತ್ತುಬಳಸಿನ ಕತ್ತಲದಾರಿ
ಮಳೆ ಹನಿಯುತ್ತಿತ್ತು
ಅವನು ಯಾರೋ ಕೊಂಚ
ದಾರಿಜತೆಯಾಗೆಂದು ಕೇಳಿಕೊಂಡ.
'ಹ್ಞೂ' ಎಂದು ಒಪ್ಪಿ ಹೊರಟೆ. ಆದರೆ
ಅವನ ಮುಖ ನೋಡುವುದೇ ಮರೆಯಿತು.
ಮುಂದೆ ಆ ದಾರಿ ವಿಚಿತ್ರವಾಗಿ
ನೆನಪಾಗತೊಡಗಿತು.
ಸಹಸ್ರಧೂಪಪಾತ್ರಗಳಿಂದೆದ್ದಂತೆ
ಮಂಜು ಮೇಲೆ ತೇಲುತ್ತಿತ್ತು.
ಆ ಸಹಯಾತ್ರಿಯ ಹಾಡು
ಒತ್ತಿ ಒತ್ತಿ ಎದೆಯಿರಿಯುತ್ತಿತ್ತು.
ಪುರಾತನ ಬಾಗಿಲುಗಳು ಹಾಗೂ
ಆ ದಾರಿಯ ಕೊನೆ ಈಗಲೂ ನೆನಪಿದೆ –
ಅಲ್ಲಿ ಆ ಅತೀತದ ವ್ಯಕ್ತಿ 'ಕ್ಷಮಿಸು' ಎಂದವನೇ
ಒಡಹುಟ್ಟಿದವನಂತೆ ನನ್ನ ಕೈಯಲ್ಲೊಂದು
ತಾಮ್ರದ ಶಿಲುಬೆಯಿರಿಸಿ ಹೊರಟುಹೋದ ...
ಈಗ ಎಲ್ಲೆಲ್ಲೂ ಬೆಂಗಾಡಿನ ಹಾಡೇ
ನನಗೆ ಕೇಳಿಬರುತ್ತಿದೆ.
ಓ, ನಾನು ಇದ್ದೂ ಇಲ್ಲದವಳಾಗಿದ್ದೇನೆ –
ಅಳುತ್ತೇನೆ, ಕೊರಗುತ್ತೇನೆ
ಉತ್ತರಿಸು, ಅಪರಿಚಿತ,
ನಾನು ನಿನ್ನನ್ನೇ ಅರಸಿದ್ದೇನೆ !

೧೯೧೬

೩೧

ಹೊಸ ಹಸಿರ ಹುಲ್ಲನೆಲ, ಅದರ ಮೇಲೆ ಬಿದ್ದಿರುವ
ಪಾರದರ್ಶಕ ಶವವಸ್ತ್ರ ಕಣ್ಣಿಗೆ ಕಾಣದಂತೆ ಕರಗುತ್ತಿದೆ.
ಅರಳುತ್ತಿರುವ ಹೂಮೊಗ್ಗೆಗಳನ್ನು ಕೊಲ್ಲುತ್ತಿದೆ
ಮೈಕೊರೆಯುವ ಕ್ರೂರ ವಸಂತ.
ಎಂಥ ಘೋರ ದೃಶ್ಯ ಈ ಅಕಾಲಿಕ ಮರಣಗಳದ್ದು
ದೇವರ ಪ್ರಪಂಚವನ್ನು ನನ್ನಿಂದ ನೋಡಲಾಗುವುದಿಲ್ಲ.
ನನ್ನಲ್ಲಿ ತುಂಬಿದೆ ದೊರೆ ಡೇವಿಡನ ದುಃಖ,
ಸಾವಿರಾರು ವರ್ಷಗಳಿಂದ ಸಾಗಿಬಂದ ಆ ರಾಜ–ಬಳುವಳಿ.

೧೯೧೬

೩೨

ನನಗನಿಸುತ್ತದೆ – ಇಲ್ಲಿ ಇನ್ನೆಂದೆಂದಿಗೂ
ಗುಂಡಸಿನ ಧ್ವನಿ ಕೇಳಿಬರುವುದಿಲ್ಲ
ಶಿಲಾಯುಗದ ಗಾಳಿಯಷ್ಟೇ
ಈ ಕಪ್ಪನೆಯ ಬಾಗಿಲುಗಳನ್ನು ಬಡಿಯುತ್ತಿರುತ್ತದೆ.
ನನಗನಿಸುತ್ತದೆ – ಇಲ್ಲಿ ಈ ಆಕಾಶದಡಿ
ಬದುಕಿ ಉಳಿಯುವವಳೆಂದರೆ ನಾನೊಬ್ಬಳೇ –
ಯಾಕೆ, ಸಾವಿನ ಮದ್ಯವನ್ನು ಎಲ್ಲರಿಗಿಂತ ಮೊದಲು
ಹೀರಬಯಸಿದ್ದವಳು ನಾನೆಯೋ ಎಂತಲೇ?

೧೯೧೭



## ೫. 'ಗುಬ್ಬಚ್ಚಿಬಾಳೆ' ('ಪದ್‌ರೋಷ್ನಿಕ್')

೩೩

ಭವಿಷ್ಯವಾಣಿ ನುಡಿದಿದ್ದ ಆ ದುರ್ದಿನ ಬಂದಿದೆ
ಈಗ ಯಾರಿಗೂ ಕವಿತೆ, ಗೀತೆ ಬೇಕಾಗಿಲ್ಲ
ಜಗತ್ತಿನಲ್ಲಿ ಯಾವ ಅದ್ಭುತವೂ ಉಳಿದಿಲ್ಲ
ನನ್ನ ಅಂತಿಮ ಆಸರೆಯೆ, ಸುಮ್ಮನಿರು. ಗುನಗುನಿಸಿ ಎದೆಸೀಳಬೇಡ.

ಇನ್ನೂ ಮೊನ್ನೆಮೊನ್ನೆಯವರೆಗೆ ಸ್ವಚ್ಛಂದವಾಗಿ ಹಾರಿ
ಬೆಳಗಿನ ಯಾನ ಮುಗಿಸಿ ಬರುತ್ತಿದ್ದ ಹಾಡುಹಕ್ಕಿಯೆ,
ಇವೊತ್ತು ಹೊಟ್ಟೆಗಿಲ್ಲದ ತಿರುಕಿಯಂತೆ ಹೋಗಿ
ಕಂಡಕಂಡವರ ಮನೆಯ ಬಾಗಿಲು ಬಡಿಯಬೇಡ.

೧೯೧೭

೩೪

ಇಡೀ ದಿನ ತನ್ನ ಆರಚಾಟಕ್ಕೆ ತಾನೇ ಬೆದರಿದ ಗುಂಪು
ಜೀವಭಯದ ಆತಂಕದಿಂದ ಮುನ್ನುಗ್ಗುತ್ತಿದೆ.
ನದಿಯ ಆ ದಂಡೆ, ಶೋಕಸೂಚಕ ಧ್ವಜಗಳ ಮೇಲಿನ
ಹಲ್ಲುಕಿರಿವ ತಲೆಬುರುಡೆಗಳು ಅನಿಷ್ಟ ಸೂಚಿಸಿವೆ.
ನಾನು ಕಂಡೆಲ್ಲ ಕನಸುಗಳು, ಕಟ್ಟಿದೆಲ್ಲ ಗೀತೆಗಳು
ಇದಕ್ಕಾಗಿಯೇ? ನನ್ನದೆ ಒಡೆದು ಛಿದ್ರಛಿದ್ರವಾಗಿದೆ,
ಗುಂಡಿನ ಮೊದಲ ಮೊಳಗಿನೊಂದಿಗೆ ಅದು ತೆಪ್ಪಗಾಯಿತು.
ಈಗ ಸಾವು ಮನೆಮನೆಯ ಮುಂದೆ ಗಸ್ತುಹೊಡೆಯಲಿದೆ.

೧೯೧೭

೩೫

ಎಲೆ ದೇಶದ್ರೋಹಿ, ನೀನು ಆ ಪಚ್ಚೆದ್ವೀಪಕ್ಕೆ ಹೋದಾಗ
ಏನೆಲ್ಲ ತೊರೆದುಹೋದೆ – ಹುಟ್ಟಿದ ನೆಲವನ್ನು,
ನಮ್ಮ ದೇವತಾವಿಗ್ರಹಗಳನ್ನು, ನಾಡಹಾಡುಗಳನ್ನು,
ಸರೋವರಗಳಂಚಿನ ಪ್ರಶಾಂತ ಪೈನ್ ಮರಗಳನ್ನು.

ಹುಚ್ಚ, ನಿನಗೆ ಬುದ್ಧಿ ಸರಿಯಾಗಿದ್ದಿದ್ದರೆ
ಈ ದುಡುಕಿಗೆ ಕೈಹಾಕುತ್ತಿದ್ದಯಾ?
ಅಲ್ಲಿಯ ರಂಗಮಹಲುಗಳಲ್ಲಿನ ಕೆಂಗೂದಲ
ಸುಂದರಿಯರಿಗೆ ಮೋಹಿತನಾಗಿ ಹಾಗೆ ಮಾಡಿದೆಯಾ?

ಹೋಗು, ಹೀಗೆಯೇ ಭ್ರಷ್ಟನಾಗಿರು. ನಿನ್ನ ರೂಢಮೂಲ
ಸಂಸ್ಕಾರಗಳನ್ನು ಹಾಳುಮಾಡಿಕೊಂಡಿದ್ದಕ್ಕೆ ಹೆಮ್ಮೆಪಟ್ಟುಕೊ.
ಆ ಮಹಾನಗರದಲ್ಲಿ ವೈಭವದಿಂದ ವಾಸಿಸು
ಹೊಸದಾಗಿ ಗಿಟ್ಟಿದ ಸ್ವಾತಂತ್ರ್ಯವನ್ನು ಪ್ರೀತಿಸು.

ಇಲ್ಲಿ ಹೀಗೇಕೆ ಬಂದು ನನ್ನ ಮನೆಯ ಸುತ್ತಮುತ್ತ
ಸುಳಿದಾಡುತ್ತ ಗೋಳಿಡುತ್ತಿ?
ನಿನಗೆ ಗೊತ್ತಿದೆ, ನೀನು ಕಾದಾಟದಲ್ಲಿ ಗಾಯಗೊಳ್ಳುವವನಲ್ಲ,
ಕಡಲಲ್ಲಿ ಮುಳುಗಿ ಸಾಯುವವನಲ್ಲ.

ಹೌದು, ಮರ್ಯಾದೆ ಕಳೆದುಕೊಂಡವರಿಗೆ
ಕಡಲು, ಕಾದಾಟಗಳ ಭಯವೆಲ್ಲಿಯದು?
ಎಂತಲೇ, 'ನಿನ್ನ ಪ್ರಾರ್ಥನೆಯಲ್ಲಿ ನನ್ನನ್ನೂ ನೆನಪಿಡೆಂದು'
ಗೋಗರೆದಿದ್ದೀಯೆ, ಅಲ್ಲವೆ?

೧೯೧೭

೩೬

ಜನತೆ ಜರ್ಮನ್ ಅತಿಥಿಗಳ ಬರವಿಗೆ ಕಾಯುತ್ತ
ಆತ್ಮಹತ್ಯೆಯ ಆತಂಕದಲ್ಲಿ ತೊಳಲುತ್ತಿತ್ತು
ರಷ್ಯದ ಚರ್ಚುಗಳು ಬೈಜಾಂಟಿಯಮ್‌ನ
ಧರ್ಮದ ಕಠೋರ ಕೆಚ್ಚನ್ನು ಕೈಬಿಟ್ಟಿದ್ದವು
ನೀವಾ ಬದಿಯ ರಾಜಧಾನಿ ಪೀಟರ್ಸ್‌ಬರ್ಗ್
ತನ್ನೆಲ್ಲ ಹೆಗ್ಗಳಿಕೆಯನ್ನೂ ಮರೆತು
ಕುಡಿದು ಮತ್ತಳಾದ ಸೂಳೆಯಂತೆ, ತನ್ನ ಮಾಲಿಕ
ಯಾರೆಂದು ತಿಳಿಯದೆ ಚಡಪಡಿಸುತ್ತಿತ್ತು ...

ಆಗ ನನಗೊಂದು ಧ್ವನಿ ಕೇಳಿಸಿತು. ಸಾಂತ್ವನ ನೀಡುತ್ತ
ಅದು ಹೇಳಿತು – "ಇಲ್ಲಿ ಬಾ,
ಪಾಪಭ್ರಷ್ಟವಾದ ನಿನ್ನ ಈ ಹಾಳುದೇಶವನ್ನು ತೊರೆ
ಸದಾಕಾಲಕ್ಕೆ ರಷ್ಯವನ್ನು ಬಿಟ್ಟು ಹೊರಬಾ.
ನಿನ್ನ ಕೈಗೆ ಮೆತ್ತಿದ ರಕ್ತದ ಕಲೆಗಳನ್ನು ತೊಳೆಯುತ್ತೇನೆ.
ನಿನ್ನೆದೆಯಿಂದ ಅವಮಾನದ ಕಹಿವಿಷವನ್ನು ಹೀರಿಹಾಕುತ್ತೇನೆ
ನಿನಗೊಂದು ಹೊಸ ಹೆಸರುಕೊಟ್ಟು
ನಿನ್ನ ಸೋಲಿನ ನೋವು, ಅಪಮಾನಗಳನ್ನು ಮುಚ್ಚುತ್ತೇನೆ".

ಆದರೆ ಅದನ್ನು ಕೇಳಿಯೂ ಕೇಳದವಳಂತೆ ಶಾಂತಳಾಗಿ
ಕೈಯಿಂದ ಕಿವಿ ಮುಚ್ಚಿಕೊಂಡೆ
– ಆ ಹೊಲಸುಮಾತುಗಳಿಂದ ನನ್ನ ದುಃಖಪೀಡಿತ ಆತ್ಮ
ಭ್ರಷ್ಟಗೊಳ್ಳದಿರಲೆಂದು.

೧೯೧೭

೩೭

ನಾನು ಇನ್ನೆಷ್ಟು ಕಾಲ ಬದುಕುತ್ತೇನೆಂದು
ಕೋಗಿಲೆಯನ್ನು ಪ್ರಶ್ನಿಸಿದೆ ...
ಪೈನ್‌ಮರಗಳ ಮೇಲ್ತುದಿಗಳು ನಡುಗಿದವು
ಹುಲ್ಲಿನ ಮೇಲೆ ಹಳದಿ ಕಿರಣವೊಂದು ಬಂದುರುಳಿತು.
ಆದರೆ ಹೊಸ ಹಸಿರ ಪೊದರಿನಾಳದಲ್ಲಿ ಇನಿತೂ ಸಪ್ಪಳವಿರಲಿಲ್ಲ ...
ಮನೆಯ ಕಡೆ ಕಾಲುಹಾಕುತ್ತೇನೆ
ತಾಜಾ ತಂಗಾಳಿ ನನ್ನ ಹಣೆಯನ್ನು
ನೇವರಿಸುತ್ತದೆ.

೧೯೧೯

೩೮

ನಮ್ಮ ಈ ಶತಮಾನ ಹಿಂದಿನ ಎಲ್ಲವಕ್ಕಿಂತ ಏಕಿಷ್ಟು ಹೊಲಸಾಗಿದೆ ?
ದುಃಖ, ಆತಂಕಗಳ ಉಬ್ಬರದಲ್ಲಿ
ತನ್ನ ಹಾಳುಹುಣ್ಣನ್ನು ತಾನೇ ಸವರಿಕೊಂಡೂ
ಏಕೆ ಅದು ಗುಣ ಕಾಣಲಾರದೆ ಹೋಗಿದೆ ?

ಸೂರ್ಯನಾಗಲೇ ಪಶ್ಚಿಮ ದಿಗಂತಕ್ಕಿಳಿದಿದ್ದಾನೆ
ಸಂಜೆಬೆಳಕಿನಲ್ಲಿ ಊರಚಾವಣಿಗಳು ಮಿನುಗುತ್ತಿವೆ
ಇಲ್ಲಾಗಲೇ ಮನೆಬಾಗಿಲುಗಳ ಮೇಲೆ ಶಿಲುಬೆಯ ಗುರುತು ಬಿದ್ದಿದೆ
ಹದ್ದುಕಾಗೆಗಳಿಗೆ ಕರೆಹೋಗಿದೆ, ಅವು ಮೇಲೆ ಸುತ್ತುಹೊಡೆಯುತ್ತಿವೆ.

೧೯೧೯

## ೬. 'ಕ್ರಿಸ್ತೋತ್ತರ ೧೯೨೧' ('ಆನೊ ದಾಮಿನಿ ೧೯೨೧')

### ೩೯. ಮೂರು ಕವಿತೆಗಳು

೧

ಹೌದು, ನನಗೆ ಅದೆಲ್ಲ ಪ್ರಿಯ : ರಾತ್ರಿಹೊತ್ತಿನ ಆ ಗುಂಪು, ಗದ್ದಲ –
ಪುಟ್ಟಪುಟ್ಟ ಮೇಜುಗಳ ಮೇಲೆ ಐಸ್‌ತುಂಬಿದ ಲೋಟಗಳು
ಹಗುರಾಗಿ ಆವಿಸೂಸುತ್ತ ಘಮಘಮಿಸುವ ಕಪ್ಪುಕಾಫಿ
ಚಳಿಯ ಕೊರೆತ, ಬೆಂಕಿಗೂಡಿನಲ್ಲಿ ಕೆಂಪುರಿಯ ಶಾಖ
ಎಲ್ಲೆಲ್ಲೂ ಉತ್ಸಾಹ, ಸಾಹಿತ್ಯದ ಮಾತುಕತೆ, ಚುರುಕಾದ ಜೋಕುಗಳು
ಹೊಸಬರ ಸ್ನೇಹಪರ ನೋಟ, ಅದರ ದಿಗಿಲು, ದುರ್ಬಲತೆ.

೨

ಅಲ್ಲಿ ಪ್ರಲೋಭನೆಯ ಹೆಸರಿಲ್ಲ, ಪ್ರಲೋಭನೆ ಅಡಗಿರುವುದು ಶಾಂತಸ್ಥಳಗಳಷ್ಟೇ.
ಅದು ನೇಮವಂತರನ್ನು ದಣಿಸುತ್ತದೆ, ಮಠವಾಸಿಗಳನ್ನು ದಂಡಿಸುತ್ತದೆ.

ವಸಂತದ ನಡುರಾತ್ರಿ ಥರೆಯದ ಆಶ್ರಮಕನ್ಯೆಯರ ಎದೆಯಲ್ಲಿ
ಪೆಟ್ಟುತಿಂದ ಹೆಣ್ಣುಹದ್ದಿನಂತೆ ಸೋತು ಚೀರುತ್ತಿರುತ್ತದೆ.

ಆದರೆ ಆ ಪ್ರಿಯಪಾಪಿಗಳಿಗೆ, ದುರ್ವ್ಯಸನಿಗಳಿಗೆ
ತೋಳಪ್ಪಿಗೆಯ ಉಕ್ಕಿನ ಬಿಗಿತದ ಬಿಸಿ ಹೇಗೆ ತಿಳಿಯಬೇಕು!

೩

ಅದಕ್ಕೇ ಇರಬೇಕಲ್ಲವೆ, ಕಳಂಕಗ್ರಸ್ತ ಸ್ಥಳಗಳ ನಿಶ್ಚಿಂತತೆಯನ್ನು ಬೀಳ್ಕೊಟ್ಟು
ಹೊರಬರುವಾಗಲೆಲ್ಲ ನಾನು ಈ ಕತ್ತಲಮನೆಗಳತ್ತ ಆತಂಕದಿಂದ ನೋಡುವುದು?
ಈಗಾಗಲೇ ನನಗೆ ಕಲ್ಮಷರಹಿತ ಖರುದನಿ ಅಭ್ಯಾಸವಾಗಿಹೋಗಿದೆ
ಈಗಾಗಲೇ ಜಗತ್ತಿನ ಕಾನೂನಿನ ಹೊರಗೆ ನನ್ನ ವಿಚಾರಣೆಯಾಗಿದೆ
ಆದರೆ ನಾನಿನ್ನೂ ಅಪರಾಧಿಯಂತೆ ದಂಡನೆ, ಅಪಮಾನಗಳಿಗೆ
ಗುರಿಯಾದ ಸ್ಥಳಗಳ ಸೆಳೆತಕ್ಕೆ ಒಲಿದಿದ್ದೇನೆ.
ಆ ಅದ್ಭುತನಗರವನ್ನು ನೋಡುತ್ತೇನೆ, ಅಲ್ಲಿನ ಇಂಪುದನಿಗೆ ಕಿವಿಗೊಡುತ್ತೇನೆ –
ಇನ್ನೂ ಅವುಗಳ ಗುಪ್ತಗೋರಿಯಾಗಿಲ್ಲವೆಂಬಂತೆ.
ಅಲ್ಲಿ ಹಗಲೂರಾತ್ರಿ ಚಳಿಯಲ್ಲಿ, ಬೇಗೆಯಲ್ಲಿ ಆದಕ್ಕೆ ತಲೆಬಾಗಿ
ನಾನು ಅಂತಿಮತೀರ್ಪಿಗೆ ಕಾಯಬೇಕಾಗಿದೆ.

೧೯೧೭

೪೦

ವಸಂತದ ಮೊದಲ ಬಿರುಗಾಳಿಯಂತೆ
ಆರ್ಗನ್ನಿನ ಧ್ವನಿ ಮತ್ತೆ ಮೊಳಗಲಿ.
ನಿನ್ನ ಕೈಹಿಡಿದವಳ ಬೆನ್ನ ಹಿಂದಿನಿಂದ
ಓರೆಗಣ್ಣುಹಾಯಿಸಿ ನೋಡಿದ್ದೇನೆ.

ವಿದಾಯ, ಪ್ರಿಯ ಗೆಳೆಯ, ವಿದಾಯ. ಸುಖಿಯಾಗಿರು.
ಇದೊ, ನಿನ್ನೆಲ್ಲ ಮಧುರವಚನಗಳನ್ನೂ ಹಿಂದಿರುಗಿಸುತ್ತಿದ್ದೇನೆ
ಆದರೆ ಜೋಕೆ, ನನ್ನೀ ವಿಚಿತ್ರ ಬಡಬಡಿಕೆಗಳು
ನಿನ್ನ ಪ್ರಿಯತಮೆಯನ್ನು ತಾಕದಿರಲಿ.

ಅವು ತಾಕಿದ್ದಾದರೆ, ನಿಮ್ಮ ಸುಂದರ ಹರ್ಷೋಲ್ಲಾಸಗಳ
ಸಹಬಾಳ್ವೆಯಲ್ಲಿ ವಿಷವೂರುತ್ತದೆ...
ನಾನೋ ಈಗೊಂದು ಮಾಯಾವನವನ್ನು ನನ್ನದಾಗಿಸಿಕೊಳ್ಳಹೊರಟಿದ್ದೇನೆ
ಅಲ್ಲಿ ಹುಲ್ಲು ಸದಾ ತೊನೆದಾಡುತ್ತಿರುತ್ತದೆ, ಕಾವ್ಯಕನ್ನಿಕೆ ದನಿಯೆತ್ತಿ ಹಾಡುತ್ತಿರುತ್ತಾಳೆ.

೧೯೨೧

೪೧

ನನಗೆ ಪ್ರಿಯರಾದವರೆಲ್ಲರಿಗೂ ನಾನು ಕೇಡುತಂದೆ
ಅವರೆಲ್ಲರೂ ಒಬ್ಬೊಬ್ಬರಾಗಿ ನಾಶವಾದರು
ನನಗೆ ಗೋಳುಬಡಿಯ! ಈ ಎಲ್ಲ ಗೋರಿಗಳ ಬಗ್ಗೆ
ನನ್ನ ಕಾವ್ಯವಾಣಿ ಎಂದೋ ಭವಿಷ್ಯ ನುಡಿದಿತ್ತು.
ಹದ್ದುಕಾಗೆಗಳು ಬಿಸಿರಕ್ತದ ವಾಸನೆ ಹಿಡಿದು
ಆಕಾಶದಲ್ಲಿ ಸುತ್ತು ಹೊಡೆಯುವಂತೆ
ನನ್ನ ಪ್ರೀತಿ, ತನ್ನ ಉಬ್ಬರದಲ್ಲಿ
ಹುಚ್ಚುಹಾಡುಗಳನ್ನು ಹೊರಹೊಮ್ಮಿಸಿತ್ತು.

ಪ್ರಿಯ, ನಿನ್ನೊಡನಿರುವುದೆಂದರ ನನಗೆ ಸವಿ, ಬಿಸುಪು
ನೀನು ನನಗೆ ಎದೆಗೂಡಿನಲ್ಲಿ ಹೃದಯವಿದ್ದಂತೆ.
ಕೈ ತಾ, ಇಲ್ಲಿ. ತಾಳ್ಮೆಗೊಟ್ಟು ಕೇಳು.
ಆಣೆಯಿಟ್ಟು ಬೇಡಿಕೊಳ್ಳುತ್ತೇನೆ, ಇಲ್ಲಿಂದ ಹೊರಟುಹೋಗು
ಎಲ್ಲಿ ಹೋಗುತ್ತಿ ಎಂದು ನಾನು ಕೇಳುವುದಿಲ್ಲ
ಎಲೆ ಕವಿತೆ, ಇವನನ್ನು ಮತ್ತೆ ನನ್ನೆಡೆಗೆ ಸೆಳೆದುತರಬೇಡ
ನನ್ನ ಪ್ರೀತಿಯನ್ನು ಅನುಭವಿಸದವನು
ಹಾಡಿಹೊಗಳಿಸಿಕೊಳ್ಳದಿದ್ದರೇನಂತೆ, ಚೆನ್ನಾಗಿ ಬಾಳಲಿ.

೧೯೨೧

೪೨

ಇಲ್ಲಿ ಎಲ್ಲ ಮಾರಿ, ಕೊಳ್ಳೆಹೋಗಿ, ಕೈಬಿಟ್ಟಿದೆ
ಸಾವು ತನ್ನ ಕರಾಳ ರೆಕ್ಕೆಗಳನ್ನು ಮಿಂಚಿಸಿ ತೋರಿಸಿದೆ
ಹಸಿವಿನ ಯಾತನೆ ಎಲ್ಲವನ್ನೂ ಕಚ್ಚಿಕಚ್ಚಿ ಹಾಕಿದೆ
ಆದರೂ ನಮಗೇಕೆ ಇಷ್ಟು ಬೆಳಕಾಗಿ ಕಾಣುತ್ತಿದೆ ?

ಹಗಲಹೊತ್ತು ನಗರದ ಸುತ್ತಣ ಅಲೌಕಿಕ ತೋಟಗಳಿಂದ
ಚೆರ್‍ರಿಯ ಸುವಾಸನೆ ಬೀಸಿಬರುತ್ತದೆ
ರಾತ್ರಿಯ ಹೊತ್ತು ಜುಲೈ ತಿಂಗಳ ಆಕಾಶದ ತಿಳಿಯಾಳದಲ್ಲಿ
ನಕ್ಷತ್ರಮಂಡಳ ಬೆಳಗುತ್ತದೆ

ಯಾವದೋ ಒಂದು ಅದ್ಭುತ –
ಯಾರಿಗೂ, ಯಾರೊಬ್ಬರಿಗೂ ತಿಳಿಯದ್ದು
ಯುಗಯುಗಗಳಿಂದ ನಾವೆಲ್ಲರೂ ಹಂಬಲಿಸುತ್ತಿದ್ದದ್ದು –
ಇದೀಗ ನಮ್ಮ ಪಾಳುಮನೆಗಳ ಹತ್ತಿರ ಹತ್ತಿರ ಬರುತ್ತಿದೆ.

೧೯೨೧

## ೪೩. ಬೆಷೆತ್ಸ್ಕ

ಶ್ವೇತವರ್ಣದ ಚರ್ಚುಗಳು, ಕಣಕಣಿಸುತ್ತ ಹೊಳೆವ ಹಿಮ
ಅಲ್ಲಿ ಮುದ್ದುಕಂದನ ಹೂನೀಲಿಗಣ್ಣುಗಳು ಅರಳುತ್ತಿವೆ.
ಪುರಾತನ ನಗರದ ಮೇಲೆ ರಷ್ಯದ ವಜ್ರರಾತ್ರಿಗಳು ಬೆಳಗಿವೆ
ಆಕಾಶದಲ್ಲಿ ಕುಡುಗೋಲು–ಚಂದ್ರ ನಿಂಬೆಮಧುವಿಗಿಂತ ಹಳದಿ.
ದೂರದ ಬಯಲುಗಳಿಂದ ಹಿಮವನ್ನು ಬೀಸಿತರುತ್ತಿದೆ ಗಾಳಿ
ಕೋಣೆಯನ್ನು ಅಣಿಗೊಳಿಸಿ ದೇವರಗೂಡಿನಲ್ಲಿ ಪುಟ್ಟಪುಟ್ಟ ದೀಪ ಹಚ್ಚಿಟ್ಟಿದ್ದಾರೆ
ಓಕ್ ಮರದ ಪೀಠದ ಮೇಲೆ ಪವಿತ್ರಗ್ರಂಥ ತೆರೆದಿಟ್ಟಿದೆ
ಜನ ದೇವದೂತರಂತೆ ಹಿಗ್ಗಿ ನಲಿಯುತ್ತಿದ್ದಾರೆ
ಅಲ್ಲಿ ಕೃಪಣವಾಗಿರುವ ನನ್ನ ನಿಷ್ಠುರ ನೆನಪು
ಗೋಪುರಗಳ ಬಾಗಿಲು ತೆರೆದು, ತಲೆಬಾಗಿ 'ಒಳ ಬಾ' ಎಂದಿತು
ಆದರೆ ನಾನು ಹೋಗಲಿಲ್ಲ, ಆ ಭೀಕರ ಬಾಗಿಲನ್ನು ದಡಾರನೆ ಬಡಿದೆ
ಚರ್ಚಿನ ಗಂಟೆಗಳು ಕ್ರಿಸ್ತ ಹುಟ್ಟಿದ್ದನ್ನು ಸಾರಿದ್ದವು, ನಗರ ಆ ಹರ್ಷಸ್ವನದಲ್ಲಿ
    ಬಂದಿಯಾಗಿತ್ತು.

ಕ್ರಿಸ್‌ಮಸ್ ೧೯೨೧

೪೪

ನೀನೀಗ ಜೀವಂತರ ನಡುವೆ ಇಲ್ಲ
ಹಿಮದ ನೆಲಬಿಟ್ಟು ಮೇಲೇಳಲಾರೆ.
ಇಪ್ಪತ್ತೆಂಟು ಬಾಯನೆಟ್ಟಿನ ಇರಿತಗಳು
ಐದು ಗುಂಡಿನ ಗಾಯಗಳು.
ಎಂತಹ ಹಾಳು—ಉಡಿಗೆ ಹೊಲಿದುಕೊಟ್ಟೆ ನಾನು
ನನ್ನ ಪ್ರಿಯತಮನಿಗೆ
ರಕ್ತವೆಂದರೆ ಅದೆಷ್ಟು ಪ್ರೀತಿ
ರಷ್ಯದ ನೆಲಕ್ಕೆ!

೧೯೨೧

೪೫

ಹುಟ್ಟಿದ ನೆಲವನ್ನು ಶತ್ರುಗಳ ಬಾಯಿಗೆ ಹಾಕಿ
ದೇಶತೊರೆದು ಹೋದವಳಲ್ಲ ನಾನು.
ಹಾಗೆ ಹೋದವರ ಕೀಳು ಹೊಗಳಿಕೆಗಳು ನನಗೆ ಬೇಕಿಲ್ಲ.
ಅವರಿಗೆ ನಾನು ನನ್ನ ಗೀತೆಗಳನ್ನು ಕೊಡುವುದಿಲ್ಲ.

ಆದರೆ ಆ ದೇಶಭ್ರಷ್ಟರ ಬಗ್ಗೆ ಸದಾ ನನಗೆ ಮರುಕವಿದೆ –
ಬಂದಿಗಳ ಇಲ್ಲವೇ ರೋಗಿಷ್ಠರ ಬಗ್ಗೆ ಇರುವಂತೆ.
ಎಲೆ ಅಲೆಮಾರಿ ಪ್ರವಾಸಿಗರೆ, ನೀವು ತುಳಿಯುವುದು ಕತ್ತಲ ದಾರಿ
ನೀವು ತಿನ್ನುವ ರೊಟ್ಟಿ ಅವರಿವರು ಕೊಟ್ಟದ್ದು, ಕಹಿವಿಷ.

ಇಲ್ಲೋ, ಹುಚ್ಚುಬೆಂಕಿಯ ದಳ್ಳುರಿಯಲ್ಲಿ
ಉಳಿದ ಅಷ್ಟಿಷ್ಟು ಯೌವನವೂ ನಷ್ಟವಾಗಿ ಹೋಗುತ್ತಿದೆ
ಯಾವದೇ ಹೊಡೆತಕ್ಕೂ ನಾವು
ಹಿಡಿದ ದಾರಿ ಬಿಟ್ಟು ಕದಲಿದವರಲ್ಲ.

ನಾವು ಬಲ್ಲೆವು – ಅಂತಿಮ ಲೆಕ್ಕಾಚಾರದ ದಿನ
ಒಂದೊಂದು ಕ್ಷಣವನ್ನೂ ಸಮರ್ಥಿಸಿಕೊಳ್ಳಬೇಕಾಗುತ್ತದೆ ...
ಆದರೆ ಜಗತ್ತಿನಲ್ಲಿ ನಮ್ಮಂತೆ ಕಣ್ಣೀರುಹಾಕದವರು
ನಮಗಿಂತ ಹೆಚ್ಚು ಸ್ವಾಭಿಮಾನಿಗಳು, ಸಾದಾ ಸ್ವಭಾವದ ಜನ ಬೇರೆ ಯಾರೂ ಇಲ್ಲ.

೧೯೨೨



## ೭. 'ಹೊಳೆಜೊಂಡು' ('ತ್ರಸ್ಟ್ನೀಕ್')

### ೪೬. ವಾಗ್ದೇವಿಗೆ

ರಾತ್ರಿ ಅವಳ ಬರವಿಗೆ ಕಾಯುವಾಗ
ಬದುಕು ಕೂದಲೆಳೆಯ ಮೇಲೆ ತೂಗುತ್ತಿರುವಂತೆ ತೋರುತ್ತದೆ.
ಕೈಯಲ್ಲಿ ಕೊಳಲು ಹಿಡಿದು ಬರುವ ಆ ಮೆಚ್ಚಿನ ಅತಿಥಿಯ ಮುಂದೆ
ಕೀರ್ತಿ, ಯೌವನ, ಸ್ವಾತಂತ್ರ್ಯಗಳು ಯಾವ ಲೆಕ್ಕ!
ಇದೊ ಬಂದಳು. ಮುಖಪರದೆಯನ್ನು ಸರಿಸಿ
ನನ್ನ ಕಡೆ ತಿರುಗಿ ಓರೆನೋಟ ಬೀರುತ್ತಾಳೆ.
ಅವಳನ್ನು ಕೇಳುತ್ತೇನೆ : "ದಾಂತೆಗೆ 'ಇನ್‌ಫರ್‍ನೊ'ವನ್ನು
ಹೇಳಿಬರೆಸಿದವಳು ನೀನೆಯೋ?" ಅವಳನ್ನುತ್ತಾಳೆ : "ಹೌದು!"

೧೯೨೪

[೪೭]

ನಾಳೆ ಏನಾಗುವುದೆಂದು ನಾನೆಂದೂ ಕಣಿ ನುಡಿದವಳಲ್ಲ
ನನ್ನ ಬದುಕು ನೀರಿನ ತೊರೆಯಂತ ಮಿರುಗುತ್ತ ಹರಿದಿದೆ
ಆದರೆ ಒಂದಂತೂ ನಿಜ : ಬಂದೀಖಾನೆಯ ಬೀಗದಕೈಗಳ ತಾಳಕ್ಕೆ
ನಾನೆಂದೂ ಗೀತೆ ರಚಿಸುವುದು ಸಾಧ್ಯವಿಲ್ಲ.

೧೯೩೦

## ೪೮. ಅಂತಿಮ ಸ್ವಸ್ತಿಪಾನ

ಹಾರೈಸಿ ಬಟ್ಟಲೆತ್ತಿದ್ದೇನೆ –
ನನ್ನ ದುಷ್ಟ ಬದುಕಿಗೆ, ಪಾಳುಬಿದ್ದ ಮನೆಗೆ,
ನಾವೊಟ್ಟಾಗಿ ಕಳೆದ ನಮ್ಮ ನಮ್ಮ ಏಕಾಂತಕ್ಕೆ, ಮತ್ತೆ ನಿನಗೆ,
ಎಲ್ಲಕ್ಕೂ ಹಾರೈಸಿ ಬಟ್ಟಲೆತ್ತಿದ್ದೇನೆ –
ನನ್ನ ತುಟಿಗಳಾಡಿದ ಸುಳ್ಳಿಗೆ,
ಈ ತಣ್ಣನೆಯ ನಿರ್ಜೀವ ಕಣ್ಣುಗಳಿಗೆ,
ಕ್ರೂರ, ಕಠಿಣ ಪ್ರಪಂಚಕ್ಕೆ,
ಮತ್ತೆ ದೇವರು ಇವೆಲ್ಲದರಿಂದ ರಕ್ಷಿಸದೆ ಹೋದನೆಂಬುದಕ್ಕೆ.

೧೯೩೪

[ ೪೯]

ಕಾಡುಜೇನಿನಲ್ಲಿ ಬಟ್ಟಬಯಲಿನ ಸೊಗಡಿದೆ
ಧೂಳಿನದು ಬಿಸಿಲು—ಕಿರಣದ ಕಂಪು.
ಹುಡುಗಿಯರ ಶ್ವಾಸದಲ್ಲಿ ನೀಲಲೋಹಿತ ಪುಷ್ಪಗಳ ಪರಿಮಳ
ಆದರೆ ಚಿನ್ನಕ್ಕೆ ವಾಸನೆಯೇ ಇಲ್ಲ.

ನೀರು ಮಿನ್ಯನೆಟ್ ಹೂಗಳ ಸುಗಂಧ ಬೀರಿದೆ
ಸೇಬಿನಲ್ಲಿ ಪ್ರೇಮದ ಘಮ.
ಆದರೆ ನಾವು ಕಲಿತ ಸಾರ್ವಕಾಲಿಕ ಪಾಠ –
ರಕ್ತಕ್ಕೆ ರಕ್ತದ್ದೇ ನಾತ.

ಜನ ಎದೆಬಡಿದುಕೊಂಡು ಗೋಳಿಡುತ್ತಿದ್ದಾಗ
ರೋಮಿನ ಮಂಡಲಾಧಿಕಾರಿ ಅವರ ಮುಂದೆ ನಿಂತು
ಕೈತೊಳೆದುಕೊಂಡದ್ದು ವ್ಯರ್ಥ.
ಹಾಗೆಯೇ ಸ್ಕಾಟ್‌ಲಂಡಿನ ರಾಣಿ
ಕೋಟೆಯ ಕಗ್ಗತ್ತಲ ಕೋಣೆಯಲ್ಲಿ
ತನ್ನ ಮೊನಚುಕೈಗಳಿಂದ ರಕ್ತದ ಕಲೆಯನ್ನು
ಅಳಿಸಿಹಾಕಲು ಪ್ರಯತ್ನಿಸಿದ್ದೂ ವ್ಯರ್ಥ.

೧೯೩೪

[ ೫೦]

ನೀನು ನನ್ನ ಕುಡಿವ ನೀರಿಗೆ ವಿಷ ಬೆರಸಿದ್ದೇಕೆ?
ತಿನ್ನುವ ಅನ್ನಕ್ಕೆ ಮಣ್ಣು ಹಾಕಿದ್ದೇಕೆ?
ನನ್ನ ಕೊನೆಗಾಲದ ಸ್ವಾತಂತ್ರ್ಯವನ್ನು
ಕಗ್ಗವಿಯ ಬದುಕನ್ನಾಗಿ ಮಾಡಿದ್ದೇಕೆ?
ನನ್ನ ಬಂಧುಮಿತ್ರರ ಕ್ರೂರಹತ್ಯೆಯನ್ನು ಕಂಡು
ನಾನು ಗೇಲಿಮಾಡಿ ನಗಲಿಲ್ಲವೆಂದೆ?
ಅಥವಾ ನನ್ನ ಬಡಪಾಯಿ ತಾಯಿನೆಲಕ್ಕೆ
ನಿಷ್ಠೆಯಿಂದ ಅಂಟಿಕೊಂಡಿದ್ದೇನೆಂದೆ?
ಆಯಿತು ಬಿಡು. ಈ ಪ್ರಪಂಚದಲ್ಲಿ ನನ್ನಂತಹ
ಕವಿಗೆ ಗಲ್ಲುಗಂಬದ ಶಾಪ ಕಟ್ಟಿಟ್ಟದ್ದೇ.
ಪಾಪವಿಮೋಚನಾರ್ಥಿಗಳ ಉಡಿಗೆತೊಟ್ಟು ಕೈಯಲ್ಲಿ ಮೋಂಬತ್ತಿ ಹಿಡಿದು
ಗೋಳಿಡುತ್ತ ಓಡಾಡುವುದು ನಮ್ಮಗಳ ಪಾಡು.

೧೯೩೫

## ೫೧. ದಾಂತೆ

'ನನ್ನ ಸುಂದರ, ಪವಿತ್ರ ಗಿಪೊನ್ನಿ'
— ದಾಂತೆ

ಸತ್ತ ಮೇಲೆಯೂ ಅವನು ತನ್ನ ಪುರಾತನ
ಫ್ಲಾರನ್ಸಿಗೆ ಹಿಂದಿರುಗಲಿಲ್ಲ.
ಅದನ್ನು ಬಿಡುವಾಗಲೂ ಅವನು ಅದರತ್ತ ಹಿಂದಿರುಗಿನೋಡಿರಲಿಲ್ಲ
ಇದೂ, ಅದಕ್ಕಾಗಿ ಈ ಗೀತೆ.
ನಡುರಾತ್ರಿ, ಪಂಜಿನ ಬೆಳಕು, ಬೀಳ್ಕೊಡಿಗೆಯ ಅಪ್ಪುಗೆ,
ಹೊಸಲ ಮೇಲಿಂದ ಕೇಳಿಬಂದ ವಿಧಿಯ ಕ್ರೂರಚೀತ್ಕಾರ.
ಸ್ವರ್ಗದಲ್ಲಿದ್ದಾಗ ಅವನಿಗೆ ಅದನ್ನು ಮರೆಯಲಾಗಲಿಲ್ಲ
ನರಕದಿಂದಲೂ ಅವನು ಅದಕ್ಕೆ ಶಾಪ ಹಾಕಿದ್ದ —
ಆದರೆ ಎಂದೂ ಪಾಪವಿಮೋಚನಾರ್ಥಿಗಳ ಉಡಿಗೆ ತೊಟ್ಟು
ಕೈಯಲ್ಲಿ ಮೋಂಬತ್ತಿ ಹಿಡಿದು ಬರಿಗಾಲಲ್ಲಿ ಓಡಾಡಲಿಲ್ಲ —
ಯಾವದಕ್ಕೆ ಅವನು ಸದಾ ಹಾತೊರೆದಿದ್ದನೊ, ಯಾವದು ಅವನಿಗಾಗಿ ಕಾಯುತ್ತಿತ್ತೊ
ಆ ನೀಚ, ವಿಶ್ವಾಸಘಾತಕ ಫ್ಲಾರೆನ್ಸ್ ನಗರದ ಬೀದಿಗಳಲ್ಲಿ.

೧೯೩೬

## [೫೨]. ಒಂದು ಪುಟ್ಟ ಭೂಗೋಳ

– ಆಸಿಪ್ ಮ್ಯಾಂದಲ್‌ಷ್ತಾಮ್‌ಗೆ

ಇದು ಈಗ ವೈಭವಕ್ಕೆ ಹೆಸರಾದ
ಯೂರೋಪಿನ ಮಹಾನಗರವಲ್ಲ
ಬದಲು ಸಾಗಾಣಿಕೆಗೆ ಒದಗಿದ ಬಂದರುಗಟ್ಟೆ –
ಸೈಬೀರಿಯಾದ ಗೋಳುನದಿ ಯೆನಿಸೆಯ್‌ಗೆ,
ಅಲ್ಲಿಂದ 'ಚಿತಾ'ಗೆ, 'ಇಷ್ಲಿಮ್'ಗೆ, ನೀರಿಗೆ ದಿಕ್ಕಿಲ್ಲದ
'ಇಗ್ರಿಸ್'ಗೆ, ಕುಖ್ಯಾತ 'ಅಕ್ಬಸಾರ್'ಗೆ.
ಅಟ್ಟಿಸಿತಂದ ಜನ ಹೆಣಗಳಂತೆ ಕೊಳೆತು ನಾರುತ್ತ
'ಸ್ವಾತಂತ್ರ್ಯ ಶಿಬಿರ'ಕ್ಕೆ ಗಾಡಿ ಬದಲಾಯಿಸುವುದು ಇಲ್ಲಿಯೇ.
ಈ ನಡುರಾತ್ರಿಯ ನೀಲಾಕಾಶವನ್ನು ನೋಡುವಾಗ
ಕಣ್ಣಮುಂದೆ ಬಂದು ನಿಲ್ಲುತ್ತದೆ ಆ ನಗರ
ಹಾಗೆಯೇ ಅವನು, ಆ ಹೆಸರಾಂತ ಮೊದಲ ಕವಿ,
ಜತೆಗೆ ನಮ್ಮಗಳ ಪಾಪ – ಹಾಗೂ ನಿನ್ನದು.

೧೯೩೭

## ೫೩

ಒಬ್ಬ ಮನುಷ್ಯ ಸತ್ತ ಮೇಲೆ
ಅವನ ಭಾವಚಿತ್ರಗಳು ಬದಲಾಗುತ್ತವೆ.
ಅವನ ಕಣ್ಣುಗಳು ಬೇರೊಂದು ಕಡೆ ನೋಡುತ್ತಿರುತ್ತವೆ.
ಕವಿಯೊಬ್ಬನ ಶವಸಂಸ್ಕಾರದಿಂದ ಹಿಂದಿರುಗಿಬಂದ ಮೇಲೆ
ನಾನು ಇದನ್ನೆಲ್ಲಾ ಗಮನಿಸಿದೆ.
ಅಲ್ಲಿಂದೀಚೆಗೆ ಮತ್ತೆ ಮತ್ತೆ ಸರಿನೋಡಿದ್ದೇನೆ
ನನ್ನ ಊಹೆ ಖಾತರಿಯಾಗಿದೆ.

೧೯೪೦



## ೮. 'ಸಪ್ತಮಗ್ರಂಥ' ('ಸಿದ್ಮ್ಯಾಯಾ ಕ್ನಿಗಾ')

### ಕಲೆಯ ರಹಸ್ಯಗಳು

#### ೫೪. ಸೃಷ್ಟಿಕರ್ಮ

ಅದರ ಬಗೆ ಹೀಗೆ – ಮೊದಲೊಂದು ತರಹದ ನಿಶ್ಚೇಷ್ಟತೆ
ಕಿವಿಯಲ್ಲಿ ಎಡೆಬಿಡದೆ ಮೊರೆಯುವ ಘಂಟಾರವ
ದೂರದಲ್ಲೆಲ್ಲೋ ಉಡುಗುತ್ತಿರುವ ಗುಡುಗಿನ ಮೊಳಗು.
ಸೆರೆಸಿಕ್ಕಿದ ಅಜ್ಞಾತಶಬ್ದಗಳು ಗೋಳಿಡುತ್ತಿವೆ,
ಗೋಗರೆಯುತ್ತಿವೆ ಎಂದನಿಸುತ್ತದೆ. ಬರುಬರುತ್ತ
ರಹಸ್ಯವರ್ತುಳ ಹೇಗೋ ಕಿರಿದಾಗುತ್ತ ಹೋಗುತ್ತದೆ
ಆದರೆ ಈ ಎಲ್ಲ ರವ–ಮರ್ಮರಗಳ ಆಳದಿಂದ
ಒಂದೇ ಒಂದು ಮೇಲೇಳುತ್ತದೆ, ಉಳಿದವೆಲ್ಲ ಹಿಮ್ಮೆಟ್ಟುತ್ತವೆ.
ಆಗ ಅದರ ಸುತ್ತ ಪ್ರಚಂಡ ಸ್ತಬ್ಧತೆ
ಕಾಡಿನಲ್ಲಿ ಹುಲ್ಲು ಬೆಳೆಯುವುದು ಸಹ ಕೇಳಿಸುವಷ್ಟು
ನೆಲದ ಮೇಲೆ ಬೆಕ್ಕಿನ ಹೆಜ್ಜೆ ಕೇಳಿಸುವಷ್ಟು ...
ಆದರೆ ಈ ಹೊತ್ತಿಗಾಗಲೇ ಪದಗಳ ಹಾಗೂ ಛಂದಪ್ರಾಸಗಳ
ಕಿರುಗೆಜ್ಜೆ–ರಿಂಗಣ ಗುನುಗುನಿಸುತ್ತ ದಾರಿ ತೋರತೊಡಗುತ್ತದೆ.
ಈಗ ಎಲ್ಲ ಸುಸ್ಪಷ್ಟ

ಬಿಳಿಯ ಹಾಳೆಗಳ ಮೇಲೆ ಕವಿತೆಯ ಪಂಕ್ತಿಗಳು
ಸಲೀಸಾಗಿ ಇಳಿಯುತ್ತ ಹೋಗುತ್ತವೆ.

೧೯೩೬

**೫೫**

ಕಾಳಗದ ಪದ, ಮೋಹಕ ಶೋಕಗೀತೆ –
ಇವುಗಳ ರಚನೆ ನನಗೆ ಹೇಳಿದ್ದಲ್ಲ.
ಕವಿತೆಯಲ್ಲಿ ಎಲ್ಲ ಅನಾಯಾಸವಾಗಿ ಬರಬೇಕು
ಜನರ ಬದುಕಿನಲ್ಲಿ ಹೇಗೋ ಹಾಗೆ.

ಬೇಲಿಬದಿಯ ಹಳದಿ ಡ್ಯಾಂಡಿಲೈನ್ ಇಲ್ಲವೇ
ಬರ್ಡಾಕ್, ಗೂಸ್‌ಫುಟ್ ಇತ್ಯಾದಿ ಕುರುಚಲುಗಳಂತೆ
ಕವಿತೆ ಎಂತಹ ಕೊಳಕಿನಲ್ಲಿ ಹುಟ್ಟಿ
ನಾಚಿಕೆಬಿಟ್ಟು ತಾನೇತಾನಾಗಿ ಬೆಳೆಯುತ್ತದೆ !

ಕೋಪದ ಅಬ್ಬರ, ತಾಜಾ ಡಾಂಬರಿನ ಕಟುವಾಸನೆ,
ಗೋಡೆಯ ಮೇಲೆ ರಹಸ್ಯವಾಗಿ ಕಟ್ಟುತ್ತ ಹೋಗುವ ಹಾವಸೆ –
ಅದೊ, ಕವಿತೆಯಾಗಲೇ ಭಾವತುಂಬಿ ಧ್ವನಿಸುತ್ತ, ರಮಿಸುತ್ತ
ನಮ್ಮನಿಮ್ಮೆಲ್ಲರಿಗೂ ಆನಂದವನ್ನುಂಟುಮಾಡುತ್ತದೆ.

೧೯೪೦

[ ೫೬ ]

ಆಡಿದ್ದನ್ನೆ ಮತ್ತೆ ಆಡಬೇಡ, ನಿನ್ನ ಹೃದಯ ಶ್ರೀಮಂತವಾಗಿದೆ –
ಹೌದು, ಹಿಂದೊಮ್ಮೆ ನನಗೆ ನಾನೇ ಹೀಗಂದುಕೊಂಡದ್ದುಂಟು
ಆದರೆ ಯಾರು ಬಲ್ಲರು, ಇಡಿಯ ಕಾವ್ಯವೆಂಬುದೇ
ಒಂದು ಉಜ್ವಲ ಉದ್ಧರಣೋಕ್ತಿಯೇನೋ!

೧೯೫೬

## ನಲವತ್ತನೆಯ ಇಸವಿ

**೫೭**

ಯುಗವೊಂದನ್ನು ಹೂತ ನಂತರ ಯಾರೂ
ಅದರ ಗೋರಿಯ ಮುಂದೆ ಶೋಕಗೀತೆ ಹಾಡುವುದಿಲ್ಲ
ಮುಳ್ಳುಗಳು, ಕಳ್ಳಿಗಳು
ಆ ಸ್ಥಳವನ್ನು ಅಲಂಕರಿಸಲು ಮುಂದಾಗುತ್ತವೆ.
ಹೆಣಹೂಳುವವರಷ್ಟೇ ತಮ್ಮ ಅಪಕರ್ಮದಲ್ಲಿ
ನಿರತರಾಗಿರುತ್ತಾರೆ. ಯಾವದೂ ಯಾರಿಗೂ ಕಾಯುವುದಿಲ್ಲ.
ಇಲ್ಲಿ ಎಲ್ಲ ಸ್ತಬ್ಧವಾಗಿದೆ, ಓ ದೇವರೇ, ಅದೆಷ್ಟು ಸ್ತಬ್ಧ –
ಕಾಲದ ನಡಿಗೆಯ ಶಬ್ದ ಸಹ ಕೇಳಿಸುವಷ್ಟು.
ಮುಂದೊಂದು ದಿನ ಆ ಗತಕಾಲ
ಸತ್ತ ಹೆಣದಂತೆ ವಸಂತದ ನದಿಯಲ್ಲಿ ತೇಲಿಬರುತ್ತದೆ –
ಆದರೆ ಯಾವ ತಾಯಿಯ ಮಗನೂ ಅದನ್ನು ಗುರುತಿಸುವುದಿಲ್ಲ
ಮೊಮ್ಮಗ ಅಸಹ್ಯದಿಂದ ಮುಖ ತಿರುಗಿಸಿಕೊಳ್ಳುತ್ತಾನೆ.
ತಲೆಗಳು ತಗ್ಗಿರುತ್ತವೆ.
ಚಂದ್ರ ಗಡಿಯಾರದ ಲೋಲಕದಂತೆ ಜೋಲಾಡುತ್ತಿರುತ್ತಾನೆ.

ಅಲ್ಲಿ – ಪಾಳುಬಿದ್ದ ಪ್ಯಾರಿಸ್ ನಗರದ ಮೇಲೆ
ಈಗ ಅದೆಂಥ ಮೌನ ತಾಂಡವವಾಡುತ್ತಿದೆ !

೧೯೪೦

**೫೮**

ನಿಮಗೆ ಮುಂದಾಗಿ ಎಚ್ಚರಿಕೆ ಕೊಡುತ್ತಿದ್ದೇನೆ
ಇಲ್ಲಿ ನಾನು ಬದುಕುತ್ತಿರುವುದು ಇದೇ ಕೊನೆಯ ಬಾರಿಗೆ.

ಹಾಡುಹಕ್ಕಿಯಾಗಿಯಾಗಲಿ, ಮೇಪಲ್ ಮರವಾಗಿಯಾಗಲಿ,
ನೀರಬುಗ್ಗೆಯಾಗಿಯಾಗಲಿ, ಹೊಳೆತಡಿಯ ಜೊಂಡಾಗಿಯಾಗಲಿ,
ನಕ್ಷತ್ರವಾಗಿಯಾಗಲಿ,
ಗಂಟೆಯ ಮಧುರಸ್ವನವಾಗಿಯಾಗಲಿ,
ನಾನು ಮುಂದೆಂದೂ ಬಂದು ನಿಮ್ಮನ್ನು ಗೊಂದಲಕ್ಕೀಡುಮಾಡುವುದಿಲ್ಲ.
ಅಥವಾ ಕೆಟ್ಟ ಕನವರಿಕೆಯಾಗಿ ಬಂದು
ನಿಮ್ಮ ಸಿಹಿನಿದ್ರೆ ಕೆಡಿಸುವುದಿಲ್ಲ.

೧೯೪೦

## [ ೭೯]. 'ಯೌವನ' – ಕವಿತಾಚಕ್ರದಿಂದ

ಹೂವಿನ ಅಂಗಡಿಗಳು
ಗ್ರಾಮೊಫೋನಿನ ಕರಕರಗಾನ
ಗ್ಯಾಸ್‌ದೀಪಗಳ ಅಮಲೇರಿದ
ಓರೆನೋಟ – ಇವುಗಳ ನಡುವೆ
ನನ್ನ ಹರೆಯದ ಕೈ
ಆ ಒಪ್ಪಂದಕ್ಕೆ ರುಜುಹಾಕಿತ್ತು.
ನಾನು ಶತಮಾನಕ್ಕಿಂತ ಸರಿಯಾಗಿ
ಹತ್ತುವರ್ಷ ದೊಡ್ಡವಳಾಗಿದ್ದೆ.

ಸಾವಿನ ಶೋಕದಲ್ಲಿದ್ದ
ಬೆಳ್ಳನೆಯ ಹಕ್ಕಿಹಣ್ಣುಗಳಿಂದ
ಮುಚ್ಚಿದಂತಿದ್ದ ಮುಳುಗುಸೂರ್ಯ
ಕಂಪುಬೀರುವ ಒಣತುಂತುರು ಮಳೆ ಉದುರಿಸಿದ್ದ ...
ತ್ರೂಷಿಮಾದ ರಕ್ತದ ನೊರೆಯ ಮೂಲಕ
ಮೋಡಗಳು ಕಾಣಿಸುತ್ತಿದ್ದವು
ಸವಾರಿಗಾಡಿಗಳಲ್ಲಿ ಸಲೀಸಾಗಿ
ಓಡಾಡುತ್ತಿದ್ದವರೆಂದರೆ ಅವೊತ್ತಿನ ಶವಗಳು ...

ಆದರೆ ಆ ದೂರದ ದಿನಗಳ ಸಂಜೆಬದುಕು
ನಮಗೀಗ ತೋರುತ್ತಿದೆ –
ಒಂದು ಜಾತ್ರೆಯಂತೆ, ವೇಷದ ಆಟದಂತೆ
ಯಾವದೋ ಭವ್ಯ ಕಿನ್ನರಕತೆಯಂತೆ ...

ಆ ಮನೆಯದಾಗಿ ಈಗ ಒಂದು ಸಿಗುರೂ ಉಳಿದಿಲ್ಲ
ಬೀದಿಗೆ ಬೀದಿಯೇ ನಾಶವಾಗಿದೆ
ಅಲ್ಲಿನ ಹ್ಯಾಟುಬೂಟುಗಳಾಗಲೇ
ಪ್ರಾಚೀನ ವಸ್ತುಸಂಗ್ರಹಾಲಯ ಸೇರಿವೆ.
ಗೋಪುರವೊಂದು ಉರುಳಿದ ಕಡೆ
ಆಕಾಶ ಅದೆಷ್ಟು ಬರಿದಾಗುವುದೆಂದು ಯಾರು ಬಲ್ಲರು?

ಮಗ ಹಿಂದಿರುಗಿ ಬಾರದ ಮನೆಯಲ್ಲಿ
ಎಂತಹ ಮೌನ ತಾಂಡವವಾಡುವುದೆಂದು ಯಾರು ಬಲ್ಲರು?

ನೀನು – ಗಾಳಿಯಂತೆ ಸದಾ ನನ್ನೊಂದಿಗಿದಿ
ಅಂತರಾತ್ಮನಂತೆ ಪಟ್ಟು ಹಿಡಿದಿದ್ದಿ
ಆದರೆ ಉತ್ತರಕೊಡೆಂದೇಕೆ ಕೇಳುತ್ತಿದ್ದೀಯೆ?
ನಿನ್ನ ಸಾಕ್ಷಿಗಳು ಯಾವವೆಂದು ನಾನು ಬಲ್ಲೆ :
ಸಂಗೀತದಿಂದ ನಿಗನಿಗ ಬೆಳಗುವ
ಪಾವಲೋವ್‌ಸ್ಕಿ ನಿಲ್ದಾಣದ ಗೋಳಗುಮ್ಮಟ
ಬಾಬಲೋವ್‌ಸ್ಕಿ ಅರಮನೆಗಳ ಬದಿಯ
ಬೆಳ್ನೊದಲ ನೀರಝರಿಗಳು.

೧೯೪೦

## [೬೦] . ಬುಲ್ಗಕೋವ್‌ನ ನೆನಪಿಗೆ

ನಾನು ನಿನ್ನ ಸಮಾಧಿಗೆ ತಂದಿರುವುದು ಗುಲಾಬಿಹೂಗಳನ್ನಲ್ಲ
ಸುಗಂಧದ ಧೂಪವನ್ನಲ್ಲ, ಬದಲು ಇದೋ – ಈ ಕವಿತೆ.
ನಿಷ್ಠುರವಾಗಿ ಬಾಳಿದವನು ನೀನು. ಕೊನೆಯವರೆಗೂ
ಅದೇ ಘನತಾತ್ಸಾರದಿಂದ ನಡೆದುಕೊಂಡೆ.
ಕುಡಿಯುತ್ತಿದ್ದೆ, ಯಾರೂ ಮಾಡದಷ್ಟು ಹಾಸ್ಯಮಾಡುತ್ತಿದ್ದೆ
ಕೊನೆಗೆ ಉಸಿರುಗಟ್ಟಿಸುವ ಮನೆಯ ನಾಲ್ಕುಗೋಡೆಗಳ ನಡುವೆ
ನೀನಾಗಿಯೇ ಸಾವನ್ನು ಒಳಬರಮಾಡಿಕೊಂಡು
ಆ ಭಯಂಕರ ಅತಿಥಿಯೊಂದಿಗೆ ಒಬ್ಬಂಟಿ ಸೆಣಸಿದೆ.
ನೀನು ಈಗಿಲ್ಲ. ನಿನ್ನ ಮೌನತಪ್ತ ಶವಸಂಸ್ಕಾರದ ವೇಳೆ
ಸುತ್ತ ಎಲ್ಲರೂ ನಿನ್ನ ಉದಾತ್ತ ದುಃಖಪೂರ್ಣ
ಜೀವನವನ್ನು ಕುರಿತು ಮಾತಾಡದೆ ಸುಮ್ಮನಿರುವಾಗ
ಬರಿಯ ನನ್ನ ಧ್ವನಿಯೊಂದೇ ಕೊಳಲಿನ ಸ್ವರದಂತೆ ಮೇಲೆದ್ದುಕೇಳಿಸುತ್ತಿದೆ.
ನಾನೊಬ್ಬಳು ಅರೆಹುಚ್ಚಿ
ಕಳೆದ ದಿನಗಳನ್ನು ನೆನೆದು ಗೋಳಾಡುವವಳು
ಉರಿಬೆಂಕಿಯ ಮೇಲೆ ನಿಧಾನವಾಗಿ ಸುಡುತ್ತ
ಎಲ್ಲವನ್ನೂ ಕಳೆದುಕೊಂಡು, ಎಲ್ಲರನ್ನೂ ಮರೆತವಳು –
ನೀನೋ, ಪ್ರಾಣಾಂತಿಕ ನೋವಿನ ನಡುಕವನ್ನು ಮರೆಮಾಚಿ
ತುಂಬು ಛಾತಿ, ಛಲಗಳಿಂದ ದೊಡ್ಡ ದೊಡ್ಡ ಕನಸುಗಳನ್ನು
ಇನ್ನೂ ನಿನ್ನೆಯೋ ಎಂಬಂತೆ ನನ್ನೊಂದಿಗೆ ಹಂಚಿಕೊಂಡಿದ್ದವನು –
ನಾನು ನಿನ್ನನ್ನು ನೆನೆಯುತ್ತಿದ್ದೇನೆಂದರೆ ಯಾರು ತಾನೇ ನಂಬಬಹುದು!

೧೯೪೦

[ ೬೧]

ಇದೋ ಬಂತು ಹೊಸ ವರ್ಷ! ಬಂತು ಹೊಸ ದುಃಖ!
ಅದೊ ಅಲ್ಲಿ ನೋಡಿ, ಕುಣಿದಿದ್ದಾನೆ ಕುತಂತ್ರಿ
ಮಂಜುಕವಿದ ಬಾಲ್ಟಿಕ್ ಸಮುದ್ರದ ಮೇಲೆ
ಡುಬ್ಬುಬೆನ್ನಿನ ಸೊಟ್ಟಗಾಲ ಹುಚ್ಚ.
ಹಿಂಸಾಗಾರಗಳಿಂದ ಬದುಕಿ ಉಳಿದವರಿಗೆ
ಅವನೇನು ಭಾಗ್ಯ ಗೊತ್ತುಮಾಡಿದ್ದಾನೆಯೊ?
ಯುದ್ಧಕ್ಕೆ ಹೋದವರೆಲ್ಲರೂ ಸತ್ತರು
ಅಂತರಿಕ್ಷದ ತಾರೆಗಳು ಅವರ ಮೇಲೆ ಬೆಳಗುತ್ತಿರಲಿ!
ಅಯ್ಯೋ, ಅವರ ಪಾಲಿಗೆ ಇನ್ನಿಲ್ಲ – ಈ ನೆಲದ ರೊಟ್ಟಿ
ಅವರಿನ್ನು ಕಾಣರು – ತಮ್ಮ ಪ್ರೀತಿಪಾತ್ರರ ಕಣ್ನೋಟ.

೧೯೪೦



## ‘ಯುದ್ಧದ ಗಾಳಿ’ – ವಿಭಾಗದಿಂದ

### ೬೨. ಪ್ರತಿಜ್ಞೆ

ಪ್ರಿಯಕರನಿಗೆ ಇವೊತ್ತು ಅಂತಿಮವಿದಾಯ ಹೇಳಿಬಂದವಳೆ,
ನಿನ್ನ ನೋವೆಲ್ಲವನ್ನೂ ಕರಗಿಸಿ ಮನೋಬಲವನ್ನಾಗಿ ಮಾರ್ಪಡಿಸು.
ನಮ್ಮ ಮಕ್ಕಳಾಣೆ, ಈ ಗೋರಿಗಳಾಣೆ
ಯಾರ ಬಲಾತ್ಕಾರಕ್ಕೂ ನಾವು ಶರಣಾಗತರಾಗುವವರಲ್ಲ!

೧೯೪೧

### ೬೩

ನಿನ್ನ ಪುಟ್ಟಮುಷ್ಟಿಯಿಂದ ಬಾಗಿಲುತಟ್ಟು, ತೆಗೆಯುತ್ತೇನೆ
ಯಾವಾಗ ತಾನೇ ನಾನು ನಿನಗೆ ಬಾಗಿಲು ತೆಗೆದಿಲ್ಲ.
ನಾನೀಗ ಉಚ್ಚ ಪರ್ವತಗಳಾಚೆ, ಬಿರುಗಾಳಿ, ಬೇಗೆ,
ಬಂಜರುಗಳಿಂದ ದೂರ ವಾಸಿಸುತ್ತಿದ್ದೇನೆ
ಆದರೆ ನಾನೆಂದೂ ನಿನ್ನ ಕೈಬಿಡುವವಳಲ್ಲ ...
ನೀನು ಅತ್ತಿದ್ದು, ನರಳಿದ್ದು ನನಗೆ ಕೇಳಿಸಲೇ ಇಲ್ಲ
ತಿನ್ನಲು ಏನಾದರೂ ಕೊಡೆಂದು ಸಹ ನೀನು ಕೇಳಲಿಲ್ಲ
ಬಾ, ಬರುವಾಗ ಮೇಪಲ್ ಮರದ ಒಂದು ಕುಡಿ ಹಿಡಿದುತಾ
ಅಥವಾ ಬರಿಯ ಇಷ್ಟು ಹುಲ್ಲಾದರೂ ಸರಿಯೇ
ಕಳೆದ ವಸಂತದಲ್ಲಿ ತಂದಂತೆ.
ಅಂಗೈಬಟ್ಟಲಲ್ಲಿ ಕೊಂಚ ನಮ್ಮ ನೀವಾ ನದಿಯ
ತಣ್ಣನೆಯ ತಿಳಿನೀರನ್ನು ಹಿಡಿದು ತಾ
ಅದರಿಂದ ನಿನ್ನ ಬಂಗಾರದ ತಲೆಯ ಮೇಲಿನ
ರಕ್ತದ ಕೋಡಿಗಳನ್ನು ಒರಸಿ ತೊಳೆಯುತ್ತೇನೆ.

೧೯೪೨

೬೪

ಕರೆಗೆ ಓಗೊಟ್ಟು ಹೋದ ನನ್ನೆಲ್ಲ ಸ್ನೇಹಿತರೆ!
ನಿಮ್ಮ ಸಾವಿಗೆ ಮರುಗಲೆಂದೇ ನಾನಿನ್ನೂ ಬದುಕಿ ಉಳಿದಿದ್ದೇನೆ.
ನಿಮ್ಮಗಳ ನೆನಪಿಗೆ ಕಣ್ಣೀರುಕರೆಯುವ ತಂಪು ವಿಲ್ಲೋ ಮರ ನಾನಲ್ಲ
ಬದಲು ನಿಮ್ಮೆಲ್ಲರ ಹೆಸರನ್ನೂ ಜಗತ್ತಿಗೆ ಕೂಗಿಕೂಗಿ ಹೇಳುತ್ತೇನೆ
ಓ, ನಿಜವಾಗಿ ಅವೆಷ್ಟು ಹೆಸರುಗಳು!
ಎಲ್ಲ ಸರಿಸಮ : ನಿಮ್ಮದು, ನಿಮ್ಮೊಂದಿಗೆ ನಮ್ಮದು !
ಕೆಂಬೆಳಕು ಹರಿಯುತ್ತಿದೆ !
ಬನ್ನಿ, ಎಲ್ಲ ಅಡ್ಡಬೀಳೋಣ !
ಲೆನಿನ್‌ಗ್ರಾಡ್‌ನ ಜನ ಮತ್ತೊಮ್ಮೆ ಹೊಗೆ ತೂರಿ ಹೊರಟಿದ್ದಾರೆ – ಸಾಲುಸಾಲಾಗಿ
ಸತ್ತವರೊಂದಿಗೆ ಬದುಕಿರುವವರು : ಕೀರ್ತಿಗೆ ಯಾರೊಬ್ಬರೂ ಹೊರತಲ್ಲ.

೧೯೪೨

## ೬೫. ವಿಲಾಪ

ಲೆನಿನ್‌ಗ್ರಾಡ್‌ನ ದುರಂತ –
ಕೈಯಿಂದ ಅಳಿಸಿಹಾಕಲಾರೆ
ಕಣ್ಣೀರಿಂದ ತೊಳೆಯಲಾರೆ
ನೆಲದಲ್ಲಿ ಹೂಳಲಾರೆ.
ಲೆನಿನ್‌ಗ್ರಾಡ್‌ನ ದುರಂತ
ದೂರದಿಂದಲೇ ಗ್ರಹಿಸುತ್ತೇನೆ :
ನೋಡಿಯೇ ಮಾತಾಡಿಯೇ
ಹೊಗಳಿಯೇ, ತೆಗಳಿಯೇ?
ಅಲ್ಲ, ಹಸಿರುಹೊಲದ ಮೇಲೆ
ನೆಲಕ್ಕೆ ಅಡ್ಡಬಿದ್ದು,
ಮೊರೆಯಿಡುತ್ತ.

೧೯೪೪

## ಉತ್ತರದ ವಿಲಾಪಗಳು

"ಎಲ್ಲವೂ ನಿನ್ನ ನೆನಪಿಗೆ ಅರ್ಪಿತ...."
– ಪುಷ್ಕಿನ್

### ೬೬. ಭಾಗ ಐದು

ನಾನೊಂದು ನದಿಯೋ ಎಂಬಂತೆ

ಈ ನಿಷ್ಠುರಯುಗ ನನ್ನ ದಿಕ್ಕು ಬದಲಾಯಿಸಿತು.
ಒಂದು ಬದುಕಿಗೆ ಬದಲಿಯಾಗಿ ಇನ್ನೊಂದು ಬಂದಿತು. ಅದು ಬೇರೊಂದು
ಬದಿಯಿಂದ, ಬೇರೊಂದು ದಿಶೆಯಲ್ಲಿ ಹರಿಯತೊಡಗಿತು.
ನನ್ನ ದಡ ಯಾವದೆಂದು ನನಗೇ ತಿಳಿಯದಾಗಿದೆ.
ಓ, ಅವೆಷ್ಟು ದೃಶ್ಯಗಳು ನನ್ನ ಪಾಲಿಗೆ ಇಲ್ಲವಾದವು
ನಾನಿಲ್ಲದೆಯೇ ಅವೆಷ್ಟು ಪರದೆಗಳು ಎದ್ದವು,
ಬಿದ್ದವು. ಎಷ್ಟೊಂದು ಮಂದಿ ಸ್ನೇಹಿತರನ್ನು
ಬದುಕಿನಲ್ಲಿ ಒಮ್ಮೆಯಾದರೂ ನೋಡದೆ ಹೋದೆ.
ಅವೆಷ್ಟು ನಗರಗಳ ದಿಗಂತಗಳು ನನಗೆ ನೋಡಸಿಗದೆ
ನನ್ನ ಕಣ್ಣಿಂದ ನೀರು ತರಿಸದೆ ಉಳಿದವು.
ಆದರೆ ಜಗತ್ತಿನಲ್ಲಿ ನನಗೆ ಗೊತ್ತಿದ್ದುದೆಂದರೆ ಅದೊಂದೇ ನಗರ.
ನಿದ್ರೆಯಲ್ಲಿ ಸಹ ಅದನ್ನು ನಾನು ಮುಟ್ಟಿ ಗುರುತಿಸಬಲ್ಲೆ.
ಅವೆಷ್ಟು ಕವಿತೆಗಳು ಬರೆಯದೆ ಉಳಿದುಹೋದವು
ಅವುಗಳ ಗುಪ್ತಮೇಳವೀಗ ನನ್ನ ಸುತ್ತ ಸುತ್ತುತ್ತಿದೆ
ಪ್ರಾಯಶಃ ಈಗಲೂ ಮುಂದೊಂದು ದಿನ ನನ್ನನ್ನು
ಉಸಿರುಗಟ್ಟಿಸಿ ಕೊಲ್ಲುವುದೇನೋ ಅದು.
ನನಗೆ ಆದಿ ಅಂತ್ಯಗಳ ಅರಿವಿದೆ
ಹಾಗೆಯೇ ಈಗ ನೆನಪಿಗೆ ತಂದುಕೊಳ್ಳಬಾರದಂತಹ
ಅಂತ್ಯದಾಚೆಯ ಬದುಕಿನದು ಸಹ.
ಬೇರೆ ಯಾವಳೋ ಹೆಂಗಸು ನನ್ನದಾಗಿದ್ದ
ಆ ಒಂದೇ ಒಂದು ಜಾಗವನ್ನು ಕಸಿದುಕೊಂಡಿದ್ದಾಳೆ
ನನ್ನ ಹಕ್ಕಿನ ಹೆಸರನ್ನು ತಾನು ಗಿಟ್ಟಿಸಿಕೊಂಡು
ಅಡ್ಡಹೆಸರನ್ನಷ್ಟೇ ನನ್ನ ಪಾಲಿಗೆ ಬಿಟ್ಟಿದ್ದಾಳೆ. ಅದರಿಂದ ಸಹ
ಪ್ರಾಯಶಃ ಎಷ್ಟು ಸಾಧ್ಯವೋ ಅಷ್ಟನ್ನು ಸಾಧಿಸಿತೋರಿಸಿದ್ದೇನೆ.

ಅಯ್ಯೋ, ನಾಳೆ ನನ್ನ ಗೋರಿಯಲ್ಲಿ ಮಲಗುವವಳು ನಾನಲ್ಲ!
ಆದರೆ ಒಮ್ಮೊಮ್ಮೆ ವಸಂತದ ಹುಚ್ಚುಗಾಳಿಯೋ
ಇಲ್ಲವೇ ಅಕಸ್ಮಾತ್ ಕೈಗೆತ್ತಿಕೊಂಡ ಪುಸ್ತಕದಲ್ಲಿನ ಒಂದು ಪದಪುಂಜವೋ
ಅಥವಾ ಯಾವದೋ ಒಂದು ಮುಗುಳುನಗೆಯೋ ನನ್ನನ್ನು
ಆ ದಕ್ಕದೆಹೋದ ಬದುಕಿನೆಡೆಗೆ ಸೆಳೆಯುತ್ತದೆ.
ಯಾವದೋ ಒಂದು ವರ್ಷದಲ್ಲಿ ಏನೋ ನಡೆಯಬಹುದಾಗಿತ್ತು,
ಮತ್ತೊಂದರಲ್ಲಿ ಮತ್ತೇನೋ : ಒಂದು ಪ್ರವಾಸವೋ, ನೋಟವೋ,
ಯೋಚನೆಗಳೊ, ನೆನಪುಗಳೊ, ಒಂದು ಹೊಸ ಪ್ರೇಮಪ್ರಸಂಗಕ್ಕೆ
ಪ್ರವೇಶವೊ – ಕನ್ನಡಿಯೊಳಗೆ ಪ್ರವೇಶಿಸಿದಂತೆ,
ಅರೆಬರೆ ವಿಶ್ವಾಸಘಾತದ ಭಾವನೆಯೊಂದಿಗೆ, ಇನ್ನೂ ನಿನ್ನೆಯವರೆಗೆ
ಕಾಣಿಸಿಕೊಳ್ಳದಿದ್ದ ಮುಖದ ಸುಕ್ಕಿನೊಂದಿಗೆ...
...
ಆದರೆ ಆ ದಕ್ಕದೆಹೋದ ಬದುಕಿನ ದಡದಿಂದ
ನನ್ನ ಈಗಿನ ಬದುಕನ್ನು ನೋಡುವುದು ಸಾಧ್ಯವಾಗಿದ್ದಿದ್ದರೆ
ಆಗ ನನಗೆ ತಿಳಿಯುತ್ತಿತ್ತು – ಅಸೂಯೆ ಎಂದರೇನೆಂದು.

೧೯೪೫

## ೬೭. ಭಾಗ ಆರು

ನನ್ನ ನೆನಪಿನಲ್ಲಿ ಮೂರು ಯುಗಗಳು ಅಡಗಿಕೊಂಡಿವೆ.
ಅವುಗಳಲ್ಲಿ ಮೊದಲಿನದು – ಇನ್ನೂ ನಿನ್ನೆ ಎಂಬಂತಿದೆ.
ಅದರ ಪವಿತ್ರ–ಗುಮ್ಮಟದಡಿ ನನ್ನ ಆತ್ಮ
ಅದರ ಸುಖದಾಯಕ ನೆರಳಿನಲ್ಲಿ ನನ್ನ ಜೀವ ಹಾಯಾಗಿವೆ.
ಅಲ್ಲಿ ಮುಖದ ನಗೆಯಿನ್ನೂ ಆರಿಲ್ಲ, ಕಣ್ಣೀರು ಇನ್ನೂ ಹರಿಯುತ್ತಿದೆ
ಮೇಜಿನ ಮೇಲೆ ಅಳಿಸದೆ ಬಿಟ್ಟ ಮಸಿಯ ಕಪ್ಪುಕಲೆ,
ಎದೆಯ ಮೇಲೆ ಮುದ್ರೆಯೊತ್ತಿದಂತೆ ಉಳಿದ – ಆ ಅಂತಿಮ,
ಅನನ್ಯ ಅವಿಸ್ಮರಣೀಯ ಚುಂಬನ.
ಆದರೆ ಅದು ಸದಾಕಾಲ ಉಳಿಯುವುದಲ್ಲ...
ಆಯಿತು, ತಲೆಯ ಮೇಲಿನ ಗುಮ್ಮಟವಾಗಲೇ ಮಾಯವಾಯಿತು –
ಇನ್ನೆಲ್ಲೋ ದೂರದ ಉಪನಗರದಲ್ಲೊಂದು ಏಕಾಕಿ ಮನೆ

ಅಲ್ಲಿ ಚಳಿಗಾಲದಲ್ಲಿ ಥಂಡಿ, ಬೇಸಿಗೆಯಲ್ಲಿ ದಗೆ,
ಜೇಡನ ಬಲೆ, ಎಲ್ಲೆಲ್ಲೂ ಧೂಳು
ಅಕ್ಕರೆಯ ಕಾಗದಗಳು ಉರಿದು ಬೂದಿಯಾಗಿವೆ
ಕಣ್ಣಿಗೆ ಕಾಣದಂತೆ ಗೋಡೆಯ ಚಿತ್ರಗಳು ಬದಲಾಗಿವೆ
ಅಲ್ಲಿಗೆ ಹೋಗುವ ಜನ ಸ್ಮಶಾನಕ್ಕೋ ಎಂಬಂತೆ ಹೋಗುತ್ತಾರೆ
ಮನೆಗೆ ಹಿಂದಿರುಗಿದ ಮೇಲೆ ಸೂತಕಸ್ನಾನ ಮಾಡುತ್ತಾರೆ
ಭಾರವಾದ ನಿಟ್ಟುಸಿರು ಬಿಡುತ್ತ, ದಣಿದ ರೆಪ್ಪೆಗಳಿಂದ
ಕಣ್ಣೀರಿನ ಹನಿಯನ್ನು ಒರಸಿಹಾಕುತ್ತಾರೆ ...
ಸಮಯ ಟಿಕ್ ಟಿಕ್ ಎನ್ನುತ್ತ ಸಾಗಿದೆ, ಒಂದರ ಹಿಂದೊಂದು
ವಸಂತ ಕಳೆದು ವಸಂತ ಬರುತ್ತದೆ, ಆಕಾಶ ಕೆಂಪಿಗೆ ತಿರುಗುತ್ತದೆ
ನಗರಗಳ ಹೆಸರು ಬದಲಾಗುತ್ತದೆ
ಘಟನೆಗಳಿಗೆ ಸಾಕ್ಷಿಗಳಾರೂ ಉಳಿದಿಲ್ಲ
ಜತೆ ಕೂತು ನೆನಸಿಕೊಳ್ಳೋಣವೆಂದರೆ, ಅಳೋಣವೆಂದರೆ ಯಾರೂ ಇಲ್ಲ.
ಈ ನೆರಳುಗಳೆಲ್ಲ ನಿಧಾನವಾಗಿ ನಮ್ಮಿಂದ ಮರೆಯಾಗುತ್ತವೆ
ಅವನ್ನು ನಾವು ಮತ್ತೆ ಕರೆಯಬಯಸುವುದಿಲ್ಲ
ಅವು ಮತ್ತೆ ಬಂದದ್ದೇ ಆದರೆ ನಿಜವಾಗಿ ನಮ್ಮ ಪಾಲಿಗೆ ಅದೆಷ್ಟು ಭಯಾನಕ!
ಎಚ್ಚರಗೊಂಡಾಗ ನಮಗೆ ಅರಿವಾಗುತ್ತದೆ – ಆ ಏಕಾಂತದ
ಮನೆಯ ದಾರಿಯನ್ನಾಗಲೇ ನಾವು ಮರೆತಿದ್ದೇವೆ
ಕೋಪ, ಅಪಮಾನಗಳಿಂದ ಉಸಿರುಗಟ್ಟುತ್ತದೆ
ಕನಸಿನಲ್ಲಿಯೋ ಎಂಬಂತೆ ಅದರ ಕಡೆ ಓಡುತ್ತೇವೆ
ಆದರೆ ಅಲ್ಲಿ ಎಲ್ಲ ಬೇರೆಯಾಗಿದೆ – ಜನ, ವಸ್ತುಗಳು, ಗೋಡೆಗಳು
ನಮ್ಮನ್ನು ಯಾರೂ ಗುರುತಿಸುವುದಿಲ್ಲ, ನಾವಲ್ಲಿ ಅಪರಿಚಿತರು
ಓ, ತಪ್ಪುಜಾಗಕ್ಕೆ ಬಂದುಬಿಟ್ಟೆವು ... ಅಯ್ಯೋ, ದೇವರೇ!
ಈಗ ಕಾದಿದೆ ಬಹು ಕಠೋರ ಕ್ಷಣ –
ನಮ್ಮ ಗತಜೀವನವನ್ನು ಈ ಬದುಕಿನ ಎಲ್ಲೆಯೊಳಗಡೆ
ನಮಗೆ ಕಾಪಾಡಿಟ್ಟುಕೊಳ್ಳಲಾಗಲಿಲ್ಲವಲ್ಲ ಎಂಬ ಅರಿವು
ಆ ಗತಜೀವನ ನಮ್ಮ ಪಕ್ಕದ ಮನೆಯವರಿಗೆ ಎಷ್ಟು ಪರಕೀಯವೊ
ಅಷ್ಟೇ ನಮಗೆ ಸಹ
ಯಾರು ಸತ್ತರೂ ಅವರನ್ನು ನಾವು ನೆನೆಯುವುದಿಲ್ಲ
ಯಾರು ನಮ್ಮಿಂದ ದೂರವಾಗಲೆಂದು ದೇವರು ಇಚ್ಛೈಸಿದನೊ
ಅವರು ನಾವಿಲ್ಲದೆಯೂ ಚೆನ್ನಾಗಿ ಬಾಳಿದರು – ಇನ್ನೂ
ಹೆಚ್ಚು ಚೆನ್ನಾಗಿಯೇ...

೧೯೪೫

೩೮

ದುರಂತ ನಾಟಕದ ಐದನೆ ಅಂಕದಿಂದ
ಶರತ್ತಿನ ಥಂಡಿ ಹವಾ ಬೀಸಿಬರುತ್ತಿದೆ
ಉದ್ಯಾನದ ಒಂದೊಂದು ಪಾತಿಯೂ
ಒಂದೊಂದು ಹೊಸಗೋರಿಯಂತೆ ಕಾಣುತ್ತಿದೆ.
ಮಹಾಶ್ರಾದ್ಧಭೋಜನ ಸಹ ಮುಗಿದು
ಇಲ್ಲಿ ಮಾಡಲು ಮತ್ತೇನೂ ಉಳಿದಿಲ್ಲ.
ಆದರೆ ನಾನೇಕೆ ಇಲ್ಲಿ ಇನ್ನೂ ಕಾದುನಿಂತಿದ್ದೇನೆ –
ಇನ್ನೇನು ಯಾವದೋ ಪವಾಡ ಸಂಭವಿಸಲಿದೆಯೆಂಬಂತೆ?
ಬಂದರುಗಟ್ಟೆಯಲ್ಲಿ, ದುರ್ಬಲ ಕೈಗಳು ಭಾರೀ ದೋಣಿಗೆ
ದೀರ್ಘಕಾಲ ಆತುನಿಲ್ಲುವುದು ಹೀಗೆಯೋ ಏನೋ –
ದಡದ ಮೇಲೆ ಉಳಿದವರಿಗೆ
ಅಂತಿಮ ವಿದಾಯ ಹೇಳುತ್ತಿರುವಂತೆ.

೧೯೪೪

೬೯

ಜನ ನನ್ನನ್ನು ಕಂಡು ಮರುಗುವುದು
ನನಗೆ ಎಂದೂ ಇಷ್ಟವಿರಲಿಲ್ಲ.
ಆದರ ನಿನ್ನ ಮರುಕ – ಅದರ ಕೆಲವೇ ಹನಿಗಳೊಂದಿಗೆ
ದೇಹದಲ್ಲಿ ಸೂರ್ಯನನ್ನು ಹೊತ್ತವಳಂತೆ ಹೊರಟಿದ್ದೇನೆ.
ಎಂತಲೇ, ಬೆಳಕುಮೂಡುವ ವೇಳೆ
ಬೆರಗು ಸೃಷ್ಟಿಸುತ್ತ ಹೊರಟಿದ್ದೇನೆ.
ಎಂತಲೇ!

೧೯೪೫

[ ೭೦]

ಆ ಸಂಜೆ ನನ್ನ ಭಾವೀಕೀರ್ತಿ
ಹೇಗ ಬದಲಾಯಿತೆಂದು
ಕಪಟಿ ಚಂದ್ರ
ಹೊರಬಾಗಿಲ ಮರೆಯಲ್ಲಿ ನಿಂತು ನೋಡುತ್ತಿದ್ದ.
ಇನ್ನು ನನ್ನನ್ನು ಯಾರೂ ಜ್ಞಾಪಿಸಿಕೊಳ್ಳುವುದಿಲ್ಲ
ನನ್ನ ಪುಸ್ತಕಗಳು ಕಪಾಟಿನಲ್ಲಿ ಕೊಳೆಯತೊಡಗುತ್ತವೆ.
ಯಾವ ಬೀದಿಯನ್ನಾಗಲಿ, ಯಾವ ಛಂದೋರೂಪವನ್ನಾಗಲಿ
'ಆಹ್ಮತೋವಾ'ಳ ಹೆಸರಿನಿಂದ ಕರೆಯುವುದಿಲ್ಲ.

೧೯೪೬

೭೧

ಎಲ್ಲ ಮುಗಿಯಿತು ... ಒಮ್ಮೆ ಹಿಗ್ಗಿ, ಮತ್ತೊಮ್ಮೆ ಗೋಳಿಡುವ
ನನ್ನ ದನಿಗೆ ಸ್ಪಂದಿಸುತ್ತಿದ್ದ ಆ ಹೃದಯ ಈಗ ತಣ್ಣಗಾಗಿದೆ.
ಇನ್ನು ನನ್ನ ಗೀತೆಗಳು ಮುಟ್ಟುವುದು
ನೀನಿಲ್ಲದ ಆ ಶೂನ್ಯರಾತ್ರಿಯನ್ನಷ್ಟೆ

೧೯೫೩

[ ೭೨]

ಜನ ತಾವು ಕಂಡ ಬೆರಗನ್ನು ತಾವೇ ಮರೆಯುವರೆ?
ಸಾವಿರ ಬಾರಿ ನನ್ನನ್ನು ಮರತಿದ್ದಾರೆ
ಸಾವಿರ ಬಾರಿ ನಾನು ಗೋರಿ ಕಂಡಿದ್ದೇನೆ
ಪ್ರಾಯಶಃ ಈಗ ನಾನಿರುವುದಾದರೂ ಅಲ್ಲಿಯೇ.
ಕಾವ್ಯಕನ್ನಿಕೆಗೆ ಕಣ್ಣಿಲ್ಲ, ಕಿವಿಯಿಲ್ಲ
ಬೀಜವನ್ನು ನೆಲದಲ್ಲಿಯೇ ಕೊಳೆಸುತ್ತಾಳೆ –
ಫೀನಿಕ್ಸ್ ಸುಟ್ಟು ಬೂದಿಯಿಂದೆದ್ದು ಬಂದಂತೆ
ನಸುನೀಲಿಯ ಮಂಜಿನಿಂದ ಅದು ಮೇಲೆದ್ದು ಬರಲೆಂದು.

೧೯೫೭

## [ ೭೩]. ಪುಸಕ್ತವೊಂದರ ಮೇಲಿನ ಅಂಕಿತ

"ಕೊಟ್ಟದ್ದು ನಿನ್ನದು".– ಶೋತಾ ರೂಸ್ತಾವೆಲಿ

ಭೀಕರ ಭಗ್ನದಡಿಯಿಂದ ಕೂಗಿ ಹೇಳುತ್ತಿದ್ದೇನೆ !
ಉರುಳಿಬೀಳುತ್ತಿರುವ ಪರ್ವತಗಳಡಿಯಿಂದ ಕಿರಚುತ್ತಿದ್ದೇನೆ!
ಮತ್ತೆ ಮತ್ತೆ ಜಗತ್ತಿಗೆ ಸಾರಿಹೇಳುತ್ತಿದ್ದೇನೆ
ಎಷ್ಟು ಸಾರಿದರೂ ಕಡಿಮೆಯೇ.

ಎಂತಹ ಭಯಂಕರ ಥಂಡಿಯಲ್ಲಿಯೂ ನಾನು ಬಾಯಿಮುಚ್ಚಲಿಲ್ಲ
ದೀರ್ಘಕಾಲದಿಂದ ಬಾಗಿಲುಮುಚ್ಚಿ ಕುಳಿತಿದ್ದರೂ
ಜನ ನನ್ನ ಧ್ವನಿಯನ್ನು ಗುರುತಿಸುತ್ತಾರೆ
ಮುಂದೊಂದು ದಿನ ನನ್ನ ಮಾತನ್ನು ನಂಬುತ್ತಾರೆ.

೧೯೫೯

೭೪

ವಿಧಿಯ ಭೀಷಣತೆ ಇಲ್ಲವೇ ಉತ್ತರದೇಶಗಳಲ್ಲಿನ ನಿಶ್ಚೇಷ್ಟತೆ –
ಇವುಗಳ ಬಗ್ಗೆ ಆಡಿ ನನ್ನನ್ನು ದಿಗಿಲುಗೊಳಿಸಬೇಡ.
ಇವೊತ್ತು ನನ್ನ–ನಿನ್ನ ಮೊದಲ ಭೇಟಿಯ ಒಸಗೆ
ಅದಕ್ಕೆ ಇನ್ನೊಂದು ಹೆಸರು – ಅಗಲಿಕೆ.
ನಾವು ನಾಳಿನ ಮುಂಬೆಳಗನ್ನು ಕಾಣುವುದಿಲ್ಲವೆಂದೂ
ನಮ್ಮ ಮೇಲೆ ಚಂದ್ರ ಅಚಂಚಲನಾಗಿದ್ದಾನೆಂದೂ ಏಕೆ ಚಿಂತಿಸುತ್ತಿ?
ಇವೊತ್ತು ನಾನು ನಿನಗೆ ಜಗತ್ತಿನಲ್ಲಿಯೇ ಅಪೂರ್ವವಾದ
ಉಡುಗೊರೆಯನ್ನು ಕೊಡಲಿದ್ದೇನೆ –
ಸಂಜೆಯ ಮತ್ತೇರದ ನದಿಯ
ನೀರಮೇಲಿನ ನನ್ನ ಜಲಬಿಂಬವನ್ನು,
ಉರುಳುತಾರೆಗಳು ಮತ್ತೆ ಆಕಾಶಕ್ಕೆ ಹಿಂದಿರುಗದಂತೆ
ಅವನ್ನು ತಡೆದು ನಿಲ್ಲಿಸಿದ ನನ್ನ ಕಣ್ಣಿನ ಈ ಓರೆನೋಟವನ್ನು,
ಹಿಂದೊಮ್ಮೆ ಹಗುರಾಗಿ, ಹೊಚ್ಚಹೊಸದಾಗಿರುತ್ತಿದ್ದು
ಈಗ ದಣಿದು ಕುಗ್ಗಿರುವ ನನ್ನ ಮಾತಿನ ಮಾರ್ದನಿಯನ್ನು.
ಇವುಗಳಿಂದಾಗಿ ಮಾಸ್ಕೊ ಬಳಿಯ ಹೊಲಕಾಗೆಗಳ
ಕೀಳುಮಾತುಗಳನ್ನು ನೀನು ಎದೆಗೆಡದೆ ಕೇಳುವಂತಾಗುತ್ತದೆ
ಅಕ್ಟೋಬರ್ ತಿಂಗಳ ತೇವದ ಗಾಳಿ
ಮೇ ತಿಂಗಳ ಬಿಸುಪಿನಿಂದ ಕೂಡಿ ಹಿತವಾಗುತ್ತದೆ –
ಎಲೆ ದೇವದೂತ, ನನ್ನನ್ನು ನೆನಪಿಡು
ಕನಿಷ್ಠ ಮೊದಲ ಹಿಮ ಬೀಳುವವರೆಗಾದರೂ ನೆನಪಿಡು.

೧೯೫೯

[ ೭೫]

ಎಲ್ಲರೂ ಹೋದರು.  ಯಾರೊಬ್ಬರೂ ಹಿಂದಿರುಗಿ ಬರಲಿಲ್ಲ
ನೀನು ಕೊನೆಯವನು.  ನೀನೊಬ್ಬ
ಪ್ರೇಮದ ಪ್ರಮಾಣವಚನಕ್ಕೆ ಕಟ್ಟುಬಿದ್ದು ಹಿಂದಿರುಗಿನೋಡಿದ್ದೀಯೆ
ರಕ್ತಸಿಕ್ತ ಆಕಾಶದತ್ತ ಕಣ್ಣುಹಾಯಿಸಲೆಂದು.
ನನ್ನದು ಶಾಪಗ್ರಸ್ತ ಮನೆ, ಶಪಿತ ಉದ್ದೇಶ
ನನ್ನ ಹಾಡಿನ ಮಾರ್ದವವೆಲ್ಲವೂ ವ್ಯರ್ಥ
ನನ್ನ ಘೋರ ದೌರ್ಭಾಗ್ಯದತ್ತ ನನಗೇ
ಕತ್ತೆತ್ತಿ ನೋಡುವ ಧೈರ್ಯವಿಲ್ಲ.
ಅವರೋ – ನನ್ನ ಅತಿ ಶುದ್ಧ ಶಬ್ದಗಳನ್ನು ಹೊಲೆಗೆಡಿಸಿದರು
ನನ್ನ ಪವಿತ್ರ ಕ್ರಿಯಾಪದಗಳನ್ನು ತುಳಿದುಹಾಕಿದರು
ಏಕೆ? – ಹೊಲತಿಯಾಗಿ ಅವರ ಮೂವತ್ತೇಳನೆಯ ಮಹಡಿಯ
ರಕ್ತ ಮೆತ್ತಿದ ನೆಲವನ್ನು ತೊಳೆದು ಸಾರಿಸಲೆಂದು.
ನನ್ನೊಬ್ಬನೇ ಮಗನಿಂದ ಬೇರ್ಪಡಿಸಿದರು
ನನ್ನ ಗೆಳೆಯರೆಲ್ಲರನ್ನೂ ಕಗ್ಗವಿಗಳಲ್ಲಿ ದೂಡಿ ಹಿಂಸಿಸಿದರು
ಎಡೆಬಿಡದೆ ನನ್ನ ಹಿಂದೆ ಹಿಂದೆ ನೆರಳಾಗಿ ಬಂದು
ಅದೃಶ್ಯ ಭರ್ಜಿಗಳಿಂದ ನನ್ನನ್ನು ಸುತ್ತುಗಟ್ಟಿದರು
ಅವರಿಂದ ನನಗೆ ಸಿಕ್ಕ ಬಹುಮಾನ – ಮೂಕತನ.
ಅಪಪ್ರಚಾರದಿಂದ ಗಿಡಿದು ತುಂಬಿ
ಜಗತ್ತಿನಲ್ಲೆಲ್ಲ ನನ್ನನ್ನು ಭ್ರಷ್ಟಗೊಳಿಸಿದರು
ಸತ್ತೆನೆನ್ನುವವರೆಗೂ ವಿಷ ಕುಡಿಸಿದರು
ವಿನಾಶದ ಅಂಚಿನವರೆಗೂ ಎಳೆದೊಯ್ದು
ಏಕೋ ಏನೋ ಅಲ್ಲಿ ನನ್ನ ಕೈಬಿಟ್ಟರು.
ಅಯ್ಯೋ, ನಾನೊಬ್ಬಳು ಪಟ್ಟಣದ ಹುಚ್ಚಿ.  ನನ್ನ ಖುಷಿಯೆಂದರೆ
ಸಾಯುವತನಕ ಅಲ್ಲಿನ ಪೇಟೆಬೀದಿಗಳಲ್ಲಿ ಅಲೆದಾಡುವುದಾಗಿದೆ.

೧೯೫೯ (?)

## [ ೭೬]. ಪ್ರಸ್ತಾವನೆ

ಕೋಮಲಸ್ವರದ ಕಿಂದರಿ ಹಿಡಿದು
ಜನರನ್ನು ಮರುಳುಮಾಡಲು ನಾನು ಬರುವುದಿಲ್ಲ.
ನನ್ನ ಕೈಯಲ್ಲಿ ನುಡಿಯುತ್ತಿರುವುದು
ಕುಷ್ಟರೋಗಿಯ  ಬುಡಬುಡಿಕೆ.
ಧೀರಶೂರ ಪರಾಕ್ರಮಿಗಳೆ, ನೀವು
ಶಪಿಸುತ್ತ, ಗೋಳಾಡುತ್ತ ಮುನ್ನುಗ್ಗಿದಂತೆ
ನಿಮ್ಮನ್ನು ಹಿಂದಟ್ಟಿ ಪಾಠ ಕಲಿಸುತ್ತೇನೆ.
ನಾನೆಂದೂ ಲಾಭ ಬಯಸಿದವಳಲ್ಲ
ಅಥವಾ ಕೀರ್ತಿಯ ಕೈ ಕಾಯ್ದವಳಲ್ಲ.
ಮೂವತ್ತು ವರ್ಷಗಳ ಕಾಲ
ಸಾವಿನ ರೆಕ್ಕೆಯಡಿ
ಬದುಕಿ ಕಳೆದವಳು ನಾನು.

೧೯೬೦

[ ೭೭]

ನನ್ನ ಪ್ರೀತಿಪಾತ್ರರನ್ನೆಲ್ಲ ಸೆಳೆದೊಯ್ಯುತ್ತಾರೆ
ಅಸೂಯೆ ತೊರೆದು ಅವರು ಹೋಗುವುದನ್ನೇ ನೋಡುತ್ತೇನೆ.
ಇನ್ನೇನು ನಾನು ಅರ್ಧಶತಮಾನಕಾಲ ಒಬ್ಬಳೇ
ಅಪರಾಧಿಯಾಗಿ ಕಟಕಟೆಯ ಹಿಂದೆ ನಿಲ್ಲಬೇಕಾಗಿದೆ.
ಸುತ್ತ ನಾಲ್ಕೂ ಕಡೆ ಕಚ್ಚಾಟ, ನೂಕುನುಗ್ಗಲು,
ಮಸಿಯ ಸಿಹಿಯಂಟಿನ ನಾತ –
ಎಲ್ಲ ಕಾಫ್ಕನ ಕಲ್ಪನೆ ಇಲ್ಲವೇ
ಚಾಪ್ಲಿನ್‌ನ ಚಿತ್ರವಿದ್ದಂತಿದೆ.
ಈ ಮಂದಿ ಗಂಭೀರ ಚರ್ಚೆಯಲ್ಲಿರುವಾಗ
ನಿದ್ರೆಯ ಮುರಿಗೆಯಲ್ಲಿರುವಂತೆ ತೋರುತ್ತದೆ.
ಇಡೀ ಮೂರು ಪೀಳಿಗೆಗಳು ಪ್ರಮಾಣಮಾಡಿ
ಕೊಟ್ಟ ತೀರ್ಪು – "ಇವಳು ತಪ್ಪಿತಸ್ಥೆ".
ಇಲ್ಲಿ ಕಾವಲುಗಾರರ ಮುಖಗಳಷ್ಟೇ ಬದಲಾಗುತ್ತವೆ
ಆರನೆಯ ಸರಕಾರೀ ವಕೀಲನಿಗೆ ಹೃದಯಾಘಾತ ...
ಆದರೆ ಇನ್ನೆಲ್ಲೋ ಉರಿಯ ಝಳಕ್ಕೆ
ವಿಶಾಲ ಅಂತರಿಕ್ಷ ಕಪ್ಪಿಟ್ಟಿದೆ
ಇಡೀ ಬಿಸಿಲುಗಾಲದ ಎಲ್ಲ ಭವ್ಯಾಕರ್ಷಣೆಗಳೂ
ನದಿಯ ದಡದ ಮೇಲೆ ಮೋಜು ಹೊಡೆಯುತ್ತಿವೆ...
ನನ್ನನ್ನು ನಾನು ಆ ಸೌಭಾಗ್ಯಪೂರ್ಣ
'ಇನ್ನೆಲ್ಲೋ'ದಲ್ಲಿ ಕಲ್ಪಿಸಿಕೊಳ್ಳುವುದು ಸಹ ಅಶಕ್ಯ.
ಶಾಪಬೈಗುಳಗಳನ್ನು ಕೇಳಿ ಕೇಳಿ ಕಿವಿ ಗಡಚಿಕ್ಕಿದೆ
ನಾನೀಗ ಹರಿದು ಜೂಲಾದ ಒಂದು ಮೇಲಂಗಿ.
ಏನು, ಈ ಪ್ರಪಂಚದಲ್ಲಿ ನಾನೊಬ್ಬಳು
ಎಲ್ಲರಿಗಿಂತ ಹೆಚ್ಚು ತಪ್ಪಿತಸ್ಥಳೆ?

೧೯೬೦

[ ೨೮]

ಈ ಪ್ರಪಂಚದಲ್ಲಿ ನನ್ನಿಂದ ಮನೋಬಲ
ಬೇಡಿ ಪಡೆದವರೆಲ್ಲರೂ –
ಬಾಯಿಕಟ್ಟಿದವರು, ಅರೆಹುಚ್ಚರು,
ಅಪಂಗರು, ದಿಕ್ಕೆಟ್ಟ ಅಬಲೆಯರು
ಬಂದಿಗಳು, ಆತ್ಮಹತ್ಯೆಗೆ ಒಲಿದಿದ್ದವರು –
ಎಲ್ಲರೂ ಒಂದೊಂದು ಕಿಗ್ಗಾಸು ಕೊಟ್ಟಿದ್ದರೂ
ಕವಿ ಕೂಜ್ಮಿನ್ ಹೇಳುತ್ತಿದ್ದಂತೆ ನಾನು
'ಇಡೀ ಈಜಿಪ್ಟಿಗಿಂತ ಹೆಚ್ಚು ಶ್ರೀಮಂತ'ಳಾಗುತ್ತಿದ್ದೆ....
ಆದರೆ ಅವರು ಹಾಗೆ ನನಗೆ ಹಣ ಕೊಡಲಿಲ್ಲ
ಬದಲು ತಮ್ಮ ಶಕ್ತಿಯನ್ನು ನನಗೆ ಹಂಚಿಕೊಟ್ಟರು
ಎಂತಲೇ ನನ್ನಲ್ಲೀಗ ಇಡೀ ಜಗತ್ತಿನ ಬಲವಿದೆ
ನನಗೀಗ ಯಾವದೂ ಕಷ್ಟವಲ್ಲ – ಈ 'ಇದು' ಸಹ.

೧೯೬೦

[ ೭೯]

ನನ್ನ ಅಂಕೆ ತಪ್ಪಿದ ಕವಿತೆಗಳಲ್ಲಿ ಒಮ್ಮೊಮ್ಮೆ
ಉಲ್ಲಾಸದ ಕಲಕಲರವ ಕೇಳಿಬರದಿದ್ದರೆ ಆಶ್ಚರ್ಯವೇನಿಲ್ಲ.
ನಾನೆಷ್ಟು ದುಃಖಿ. ಈಗಾಗಲೇ ನನ್ನ ಓದುಗರಲ್ಲಿ ಮುಕ್ಕಾಲು ಮಂದಿ
ಪಿತೃಲೋಕದ ಉರಿನೀರನದಿಯನ್ನು ದಾಟಿಹೋಗಿದ್ದಾರೆ.

ಇನ್ನು ನೀವು ಸ್ನೇಹಿತರು! ಕೆಲವರೇ ಉಳಿದಿದ್ದೀರಿ
ಎಂತಲೇ ದಿನೇ ದಿನೇ ಹೆಚ್ಚು ಪ್ರಿಯರಾಗುತ್ತಿದ್ದೀರಿ.
ಹಿಂದೊಮ್ಮೆ ಅತ್ಯಂತ ದೀರ್ಘವೆನಿಸಿದ್ದ ಈ ದಾರಿ
ಈಗ ಅದೆಷ್ಟು ಕಿರಿದಾಗಿದೆ?

ಸುಮಾರು ೧೯೬೦

## ೮೦. ಮಾರ್ದನಿ

ಗತಕಾಲದ ದಾರಿಗಳು ಎಂದೋ ಮುಚ್ಚಿಹೋದವು
ನನಗೀಗ ಆ ಕಳೆದ ಬದುಕನ್ನು ಕಟ್ಟಿಕೊಂಡು ಏನಾಗಬೇಕಾಗಿದೆ?
ಅಲ್ಲಿರುವುದಾದರೂ ಏನು? – ರಕ್ತಮೆತ್ತಿದ ಕಲ್ಲುಗಳು.
ಇಟ್ಟಿಗೆಯಿಟ್ಟು ಭದ್ರವಾಗಿ ಮುಚ್ಚಿದ ಬಾಗಿಲು
ಅಥವಾ ನಾನೆಷ್ಟೇ ಬೇಡಿಕೊಂಡರೂ
ತೆಪ್ಪಗಾಗದ ಒಂದು ಮಾರ್ದನಿ...
ನಾನು ಹೃದಯದಲ್ಲಿ ಹೊತ್ತಿರುವುದರ ಪಾಡೇ
ಆ ಮಾರ್ದನಿಗೂ ಬಂದಿದೆ.

೧೯೬೦

## ೮೧. ಬೋರಿಸ್ ಪಾಸ್ತರ್‌ನಾಕ್

ತನ್ನ ಕಣ್ಣುಗಳನ್ನು ಅಶ್ವಾಕ್ಷಗಳಿಗೆ ಹೋಲಿಸಿಕೊಂಡ ಅವನು
ಮಾಲುಗಣ್ಣಿಂದ ದೃಷ್ಟಿಸಿ ನೋಡುತ್ತಾನೆ, ಕಾಣುತ್ತಾನೆ, ಗುರುತಿಸುತ್ತಾನೆ
ಅದೊ, ಮಂಜುಗಡ್ಡೆ ಸೊರಗಿ ನೀರಾಗಿ ಹರಿಯುತ್ತದೆ
ನೀರಗುಂಡಿಗಳು ಅದಿರುವಜ್ರದಂತೆ ಹೊಳೆಯತೊಡಗುತ್ತವೆ.

ದಿಬ್ಬ, ದಿಮ್ಮಿ, ಮರದೆಲೆ, ಮೋಡ –
ಇಡೀ ಹಿಂಬಯಲೇ ಪಾದರಿಬಣ್ಣದ ಮಸಕಿನಲ್ಲಿ ವಿರಮಿಸಿದೆ.
ರೈಲಿಂಜಿನ್ನಿನ ಸಿಳ್ಳು, ಕಲ್ಲಂಗಡಿ ಸಿಪ್ಪೆಯ ಚಟಚಟ
ಗಂಧ ಚಿಮುಕಿಸಿದ ಕೈಗವಸಿನೊಳಗಡೆ ಪುಕ್ಕಲ ಕೈ.

ಗುನುಗುತ್ತಾನೆ, ಗುಡುಗುತ್ತಾನೆ, ಹಲ್ಲುಕಡಿಯುತ್ತಾನೆ, ಬಂಡೆಗೆ ಅಲೆಬಡಿಯುತ್ತಾನೆ
ಮರುಕ್ಷಣ ತೆಪ್ಪಗಾಗುತ್ತಾನೆ. ಅದರರ್ಥ – ಅವನು
ದಿಕ್–ಆಕಾಶಗಳ ಸೂಕ್ಷ್ಮನಿದ್ರೆಗೆ ಭಂಗಬರದಂತೆ
ಪೈನ್‌ಮುಳ್ಳುಗಳ ನಡುವೆ ಎಚ್ಚರದಿಂದ ದಾರಿಮಾಡಿಕೊಂಡು ಸಾಗಿದ್ದಾನೆ.

ಅದರರ್ಥ – ಖಾಲಿತನಗಳಲ್ಲಿ ಅವನು ಕಾಳೆಣಿಸಿದ್ದಾನೆ
ಮತ್ತೂ ಅದರರ್ಥ – ಯಾವದೂ ಶವಸಂಸ್ಕಾರ ಮುಗಿಸಿಕೊಂಡು ಅವನು
ತನ್ನ ಕರಾಳ, ಶಾಪಗ್ರಸ್ತ ದರ್ಯಾಲ್ ಕಮರಿಯ
ಗೋರಿಗಲ್ಲಿನ ಬಳಿಗೆ ಹಿಂದಿರುಗಿದ್ದಾನೆ.

ಮತ್ತೆ ಮಾಸ್ಕೋದ ದಣಿವು ಉರಿದುಹೋಗುತ್ತದೆ
ದೂರದಲ್ಲೆಲ್ಲೊ ಸಾವಿನ ಕಿರುಗಂಟೆಯ ಕಲಕಲ ...
ಸೊಂಟದೆತ್ತರ ಹಿಮಬಿದ್ದು, ಎಲ್ಲ ಕೊನೆಮುಟ್ಟಿರುವಾಗ
ಮನೆಯಿಂದ ಎರಡೇ ಹೆಜ್ಜೆ ದೂರದಲ್ಲಿ ದಾರಿತಪ್ಪಿದವರಾರು?

ಅವನು ಹೊಗೆಯನ್ನು 'ಲಾವೊಕೂನ್'ನಿಗೆ ಹೋಲಿಸಿದ
ಸ್ಮಶಾನದ ಮುಳ್ಳುಕಳ್ಳಿಗಳನ್ನು ಕುರಿತು ಹೊಗಳಿ ಹಾಡಿದ
ತನ್ನ ಕವಿತೆಯ ಬಿಂಬೋಪಬಿಂಬಕ ಚರಣಗಳ ವಿಸ್ತಾರದಲ್ಲಿ
ಜಗತ್ತಿಗೆ ಹೊಸ ಹೊಸ ಧ್ವನಿ ತುಂಬಿದ –

ಎಂತಲೇ ಒಂದು ಬಗೆಯ ಚಿರಂತನ ಬಾಲ್ಯ ಅವನಿಗೆ ಪುರಸ್ಕಾರವಾಗಿ ದೊರೆಯಿತು
ಅದರಲ್ಲಿ ಜ್ಯೋತಿರ್ಪುಂಜಗಳ ಔದಾರ್ಯವಿತ್ತು, ತೀಕ್ಷ್ಣದೃಷ್ಟಿಯಿತ್ತು
ಇಡೀ ಜಗತ್ತೇ ಅವನ ಪಿತ್ರಾರ್ಜಿತ ಆಸ್ತಿಯಾಯಿತು
ಅದನ್ನು ಅವನು ಎಲ್ಲರೊಂದಿಗೂ ಹಂಚಿಕೊಂಡ

೧೯೩೬

## ೮೨. ಪಾಸ್ತರ್‌ನಾಕ್‌ನ ನೆನಪಿಗೆ

"ಹಕ್ಕಿಯಂತೆ ನನಗೆ ಉತ್ತರಿಸುತ್ತದೆ, ಮಾರ್ದನಿ".
– ಪಾಸ್ತರ್‌ನಾಕ್

ನಿನ್ನೆ ಆ ಅನನುಕರಣೀಯ ಧ್ವನಿ ಮೌನವಪ್ಪಿತು
ಕಾಡಿನ ತೋಪುಗಳೊಂದಿಗೆ ಸಂವಾದಿಸುತ್ತಿದ್ದ ಅವನು ನಮ್ಮನ್ನು ತೊರೆದುಹೋದ.
ಈಗವನು ಜೀವಪೋಷಕ ಧಾನ್ಯದ ತೆನೆಯಾಗಿಯೋ
ಇಲ್ಲವೇ ತಾನು ಕುರಿತು ಹಾಡುತ್ತಿದ್ದ ಹನಿಮಳೆಯಾಗಿಯೋ ಬದಲಾಗಿದ್ದಾನೆ.
ಹೂಗಳು ನಮ್ಮ ಜಗತ್ತಿನ ಮೀಸಲ ಸ್ವತ್ತು. ನಿನ್ನೆ ಅವೆಲ್ಲ
ಅವನ ಸಾವಿಗೆ ಪುಷ್ಪಾಂಜಲಿ ಅರ್ಪಿಸಲೆಂಬಂತೆ ಅರಳಿದವು.
ವಿನಯದಲ್ಲಿ 'ಭೂಮಿ' ಎಂದು ಕರಸಿಕೊಂಡ ನಮ್ಮ ಈ ಗ್ರಹ
ಹಠಾತ್ತನೆ ತೆಪ್ಪಗಾಯಿತು.

ಮೇ ೧೯೬೦

೮೩.

ಕುರುಡದೊರೆ ಈಡಿಪಸ್ಸಿನ ಮಗಳಂತೆ
ವಾಗ್ದೇವಿ ಆ ಕಾವ್ಯರ್ಷಿಯನ್ನು ಸಾವಿನೆಡಗೆ ಕೈಹಿಡಿದು ಕರೆದೊಯ್ದಳು.
ಆ ಶೋಕಸಂತಪ್ತ ಮೇ ತಿಂಗಳು ಕಿಟಕಿಯಾಚೆ
ಒಂದೇ ಒಂದು ವಿಭ್ರಾಂತ ಲಿಂಡನ್ ಮರದಲ್ಲಿ ಹೂವರಳಿತ್ತು.
ಹಿಂದೊಮ್ಮೆ ಆ ಕಿಟಕಿಯ ಬಳಿ ನಿಂತು ಅವನು ನನಗೆ ಹೇಳಿದ್ದ –
"ನನ್ನ ಮುಂದೆ ಬಂಗಾರದ ದಾರಿ ರೆಕ್ಕೆವಡೆಯುತ್ತಿದೆ
ಅಲ್ಲಿ ಉನ್ನತ ಆದರ್ಶಗಳು ನನ್ನನ್ನು ಕಾಪಾಡಿಕೊಂಡು ಹೋಗುತ್ತವೆ".

ಜೂನ್ ೧೯೬೦

## ೮೪. ಕಮರಾವೊ ಚಿತ್ರಗಳು

'ಒ ಅಳಲ ವಾಣಿಯೇ...' – ತ್ಸ್ವೆತಯೇವಾ

ನಾನಿಲ್ಲಿ ಎಲ್ಲವನ್ನೂ, ಪ್ರಪಂಚದ
ಪ್ರತಿಯೊಂದು ವರಪ್ರಸಾದವನ್ನೂ ತೊರೆದಿದ್ದೇನೆ
'ಈ ಸ್ಥಳ'ದ ರಕ್ಷಣಾದೇವತೆ ಈಗ
ನೀರದಾರಿಗೆ ಅಡ್ಡನಿಂತ ಕಾಡುಮರದ ಕೊಂಬೆ.

ಒಂದು ರೀತಿಯಲ್ಲಿ ನಾವೆಲ್ಲರೂ ಬದುಕಿನ ಅತಿಥಿಗಳು
ಬದುಕುವುದು ನಮ್ಮ ಪಾಲಿಗೊಂದು ಬರಿಯ ವಾಡಿಕೆ, ಅಷ್ಟೆ
ಆಕಾಶವೀಥಿಯಲ್ಲಿ ಎರಡು ಧ್ವನಿಗಳು
ತಮ್ಮತಮ್ಮಲ್ಲೇ ಮಾತಾಡಿಕೊಳ್ಳುತ್ತಿವೆ ಎಂದನಿಸುತ್ತದೆ.

ಎರಡೆಂದೆನೆ? ಅಲ್ಲ, ಪೂರ್ವದಂಚಿನ ಗೋಡೆಯ ಕಡೆ
ರ್‍ಯಾಸ್ಪ್‌ಬೆರಿ ಹಣ್ಣಿನ ಪೊದೆಯಲ್ಲಿ
'ಎಲ್ಡರ್' ಬೆರಿಯ ಕಪ್ಪನೆಯ ತಾಜಾ ಕೊಂಬೆ –
ಮರೀನಾಳ ಪತ್ರ ಅದು.

೧೯೬೧

## ೮೫. ಸಫೋಕ್ಲಿಸ್‌ನ ಮರಣ

ಆ ರಾತ್ರಿ ಸಫೋಕ್ಲಿಸ್‌ನ ಮನೆಯ ಮೇಲೆ ಹದ್ದೊಂದು ಹಾರಿಬಂದಿತ್ತು.
ಇದ್ದಕ್ಕಿದ್ದಂತೆ ತೋಟದಲ್ಲಿ ತಿತ್ತಿರಿಹುಳುಗಳು ಮೊರೆಯತೊಡಗಿದವು.
ಆ ಗಳಿಗೆ ಊರ ಕೋಟೆಗೋಡೆಗಳ ಬದಿ ಹಾಯ್ದು, ಶತ್ರುಶಿಬಿರ ದಾಟಿ
ಆ ಮಹಿಮಾಪುರುಷ ಅಮೃತತ್ವ ಮುಟ್ಟಿದ್ದ.
ಅದೇ ಹೊತ್ತಿಗೆ ನಿದ್ರೆಯಲ್ಲಿ ಶತ್ರುದೊರೆಗೊಂದು ವಿಚಿತ್ರಸ್ವಪ್ನ ಬಿದ್ದಿತ್ತು
ಸ್ವತಃ ದೇವ ದಿಯೊನಿಸಸ್‌ನೇ ಬಂದು ಮುತ್ತಿಗೆ ನಿಲ್ಲಿಸೆಂದು ಅಪ್ಪಣೆಮಾಡಿದ್ದ.
ಕದನದ ಗದ್ದಲದಿಂದ ಕವಿಯ ಅಂತಿಮಕ್ರಿಯೆಗೆ ಅಡ್ಡಿಯಾಗಬಾರದೆಂದು,
ಆಥೆನ್ಸಿನ ಜನತೆಗೆ ತಮ್ಮ ಕವಿಗೆ ಶ್ರದ್ಧಾಂಜಲಿ ಅರ್ಪಿಸುವ ಭಾಗ್ಯ ತಪ್ಪಬಾರದೆಂದು.

೧೯೬೧

## ೮೬. ತಾಯಿನೆಲ

> ಜಗತ್ತಿನಲ್ಲಿ ನಮ್ಮಂತೆ ಕಣ್ಣೀರು ಹಾಕದವರು
> ನಮಗಿಂತ ಹೆಚ್ಚು ಸ್ವಾಭಿಮಾನಿಗಳು, ಸಾದಾಸ್ವಭಾವದ ಜನ ಬೇರೆ ಯಾರೂ ಇಲ್ಲ.
> – ೧೯೨೨

ಅದನ್ನು ನಾವು ಮೆಚ್ಚಿನ ತಾಯಿತಿಗಳಲ್ಲಿಟ್ಟು ಎದೆಯ ಮೇಲೆ ಮೆರೆಯುವುದಿಲ್ಲ
ಅದನ್ನು ಕುರಿತು ಎದೆಕರಗಿಸುವ ಕವಿತೆ ಕಟ್ಟುವುದಿಲ್ಲ
ಅದು ನಮ್ಮ ಕಹಿನಿದ್ರೆಯನ್ನು ಕೆಣಕಲು ಬರುವುದಿಲ್ಲ
ಅದು ನಾವು ಬಯಸಿದ ಸ್ವರ್ಗವಲ್ಲದೆಯೂ ಇರಬಹುದು.
ಅದನ್ನು ನಾವೆಂದೂ ಕೊಳ್ಳುವ ಇಲ್ಲವೇ ಮಾರುವ ವಸ್ತುವನ್ನಾಗಿ ಮಾಡಿ
ಹೃದಯದಲ್ಲಿ ಹೊತ್ತಿಲ್ಲ
ರೋಗ, ಬಡತನ, ಮೂಕತನಗಳು ಬಡಿದಾಗ
ಅದನ್ನು ನಾವು ನೆನೆಯುವುದೂ ಇಲ್ಲ.
    ಹೌದು, ನಮ್ಮ ಬೂಟಿಗೆ ಮೆತ್ತಿದ ಕೆಸರು ಅದು
    ನಮ್ಮ ಹಲ್ಲುಸಂದಿಗೆ ಹತ್ತುವ ಮರಳಕಣ ಅದು.
    ಅದನ್ನು ತುಳಿದಾಡುತ್ತೇವೆ, ನಡೆದಾಡಿ ಪುಡಿಮಾಡುತ್ತೇವೆ
    ನಾವು ತಾಯಿನೆಲವೆನ್ನುವುದು ಮಣ್ಣುಧೂಳಲ್ಲದೆ ಬೇರೆ ಅಲ್ಲ.
ಆದರೂ ಕೊನೆಗೊಂದು ದಿನ ನಾವು ಅದರಲ್ಲಿಯೇ ಬೆರತು ಒಂದಾಗುತ್ತೇವೆ
ಎಂತಲೇ ನಿಸ್ಸಂಕೋಚವಾಗಿ ನಾವನ್ನುತ್ತೇವೆ – "ಅದು ನಮ್ಮದು".

೧೯೬೧

## ೮೭. ಕೊನೆಯ ಗುಲಾಬಿ

ಮೊರಸೋವಾಳೊಂದಿಗೆ ನೆಲಕ್ಕೆ ಅಡ್ಡಬೀಳುವುದು
ಹೆರಾದನ ಮಲಮಗಳೊಂದಿಗೆ ಕುಣಿಯುವುದು
ದೀದೋಳ ಚಿತಾಗ್ನಿಯಿಂದ ಹಾರಿ
ಜೋನಳ ಸುಡುಗಂಬ ಅಪ್ಪುವುದು.
ಸಾಯುವುದು, ಏಳುವುದು, ಬದುಕುವುದು –
ದೇವರೇ, ನಾನೆಷ್ಟು ದಣಿದಿದ್ದೇನೆಂದು ನೀನು ನೋಡಿದ್ದಿ.
ಸಾಕು, ಇವೆಲ್ಲವನ್ನೂ ತೊಗೊ. ಆದರೆ ಮತ್ತೊಮ್ಮೆ ಈ ಕೆಂಗುಲಾಬಿಯ
ತಾಜಾತನವನ್ನು ಅನುಭವಿಸುವ ಶಕ್ತಿಯಷ್ಟನ್ನು ಕರುಣಿಸು.

೧೯೬೨

## ೮೮. ಹದಿಮೂರು ಸಾಲುಗಳು

ಅಂತೂ ಕೊನೆಗೊಮ್ಮೆ ನಿನ್ನ ಬಾಯಿಂದ ಆ ಶಬ್ದ ಹೊರಬಿದ್ದಿತ್ತು.
ಆದನ್ನು ನೀನಾಡಿದ್ದು ಮೊಣಕಾಲೂರಿ ಅಲ್ಲ,
ಬದಲು ಬಂಧನ ಕಿತ್ತುಹಾಕಿ ಬಂದು,
ಅನಾಯಾಸವಾಗಿ ಸುರಿಯುತ್ತಿದ್ದ ಕಣ್ಣೀರಿನ ಕಾಮನಬಿಲ್ಲಿನ ಮೂಲಕ
ಬರ್ಚ್‌ಮರಗಳ ನೆರಳಿನ ರಕ್ಷಣೆ ಕಂಡವನಂತೆ.
ನಿನ್ನ ಸುತ್ತ ಮೌನ ಗಾನಗೆಯ್ಯುತೊಡಗಿತ್ತು
ಸೂರ್ಯನ ತಿಳಿಕಿರಣಗಳು ಸಂಜೆಯ ಮಬ್ಬನ್ನು ಬೆಳಗಿಸಿದ್ದವು
ಒಂದು ಲೋಕ ಇನ್ನೊಂದು ಲೋಕದಲ್ಲಿ ಬದಲಾಗಿತ್ತು
ಆಶ್ಚರ್ಯವೆಂದರೆ ಮದ್ಯದ ರುಚಿ ಸಹ ಬೇರೆಯಾಗಿತ್ತು
ಕೊಲೆಪಾತಕಿಯಾದ ನಾನು ಸಹ
ಮಂಗಳಮಯ ಬದುಕು ಮುಂದುವರಿಯಲೆಂದು ಆಶಿಸಿ
ಆ ಅಲೌಕಿಕ ಶಬ್ದವನ್ನು ಎದುರುನೋಡುತ್ತ
ಭಕ್ತಿಯಿಂದ ಮೌನತಾಳಿದೆ.

೧೯೬೩



# ಅರಳಿದ ಕಾಡುಗುಲಾಬಿ (ಸುಟ್ಟುಹೋದ ಕೈಬರೆಹದ ಪುಸ್ತಕದಿಂದ)

"ಮಾನವ ಪ್ರಪಂಚದಿಂದ ನೀನೆಷ್ಟು ದೂರವಿದ್ದೀಯೆ".

— ಕೀಟ್ಸ್

೮೯

ಹಬ್ಬದ ಶುಭಾಶಯಗಳ ಬದಲು
ಈ ಒಣ ಬಿರುಸುಗಾಳಿ
ನಿನ್ನ ಬಳಿ ತರಲಿದೆ –
ಬರಿಯ ಹಾಳಿನ ವಾಸನೆಯನ್ನು, ಹೊಗೆಯ ರುಚಿಯನ್ನು
ನಾನೇ ಕೈಯಾರೆ ಬರೆದಿಟ್ಟ ಈ ಕವಿತೆಗಳನ್ನು.

೧೯೬೧

## ೯೦. ಸುಟ್ಟ ಕೈಬರೆಹದ ಪುಸ್ತಕ

ನಿನ್ನ ಯಶಸ್ವೀ ಸಹೋದರಿಯಾಗಲೇ
ಪುಸ್ತಕದ ಕಪಾಟಿನಲ್ಲಿ ಮರೆಯುತ್ತಿದ್ದಾಳೆ
ಆದರೆ ನಿನ್ನ ತಲೆಯ ಮೇಲೆ ನಕ್ಷತ್ರರಾತ್ರಿಗಳು ಕಿಡಿಕಾರುತ್ತ ಸರಿದುಹೋಗುತ್ತಿವೆ
ನಿನ್ನ ಕಾಲ ಕೆಳಗೆ ಹಬ್ಬದ ಕಿಚ್ಚು ಉರಿಯುತ್ತಿದೆ.
ಬೆಂಕಿಯೆಂದರೆ ನೀನೆಷ್ಟು ಭಯಪಡುತ್ತಿದ್ದೆ!
ನೀನೆಷ್ಟು ಬದುಕಬಯಸಿದ್ದೆ, ಅದಕ್ಕಾಗಿ ನೀನೆಷ್ಟು ಗೋಗರೆಯುತ್ತಿದ್ದೆ.
ಆದರೆ ಇದ್ದಕ್ಕಿದ್ದಂತೆ ನಿನ್ನ ದೇಹ ನಡುಗಹತ್ತಿತು
ಮರೆಯಾಗುತ್ತಿದ್ದ ನಿನ್ನ ಧ್ವನಿ ನನ್ನನ್ನು ಶಪಿಸತೊಡಗಿತು.
ಪೈನ್ ಮರಗಳು ಕಂಪಿಸತೊಡಗಿದವು
ಚಂದ್ರಜಲದಾಳದಲ್ಲಿ ಅವುಗಳ ಪ್ರತಿಬಿಂಬ ಅಲುಗಾಡುತ್ತಿತ್ತು.

ಹಬ್ಬದ ಕಿಚ್ಚಿನ ಸುತ್ತ ಅತಿ ಪವಿತ್ರ ವಸಂತವಾಗಲೇ
ಸಾವಿನ ಸುತ್ತುಕುಣಿತ ಕುಣಿಯುತ್ತಿತ್ತು.

೧೯೬೧

## ೯೧. ಕನಸಿನಲ್ಲಿ

ಈ ದೀರ್ಘ ಕರಾಳ ವಿಯೋಗದಲ್ಲಿ
ನಾನು ನಿನ್ನೊಂದಿಗೆ ಸಮಾನ–ಪಾಲುಗಾರಳಾಗಿದ್ದೇನೆ
ಏಕೆ ದುಃಖಿಸುತ್ತಿ? ಬದಲು, ಕೈ ತಾ.
ಮತ್ತೊಮ್ಮೆ ಕನಸಿನಲ್ಲಿ ಬರುವುದಾಗಿ ಮಾತುಕೊಡು.
ನಮ್ಮದು ಬೆಟ್ಟಬೆಟ್ಟಗಳ ಸಂಬಂಧ
ನಾನೂ ನೀನೂ ಈ ಪ್ರಪಂಚದಲ್ಲಿ ಕೂಡುವುದು ಸಾಧ್ಯವಿಲ್ಲ
ಆಗಾಗ ನಡುರಾತ್ರಿ ನಕ್ಷತ್ರಗಳ ಮೂಲಕ
ಸುದ್ದಿ ಕಳಿಸುತ್ತಿರು.

೧೯೪೬

## ೯೨

ನಿನ್ನ ಕಲ್ಪನೆ ನಾನು. ಅದರಂತಹದು ಜಗತ್ತಿನಲ್ಲಿ ಎಲ್ಲೂ ಇಲ್ಲ,
ಪ್ರಾಯಶಃ ಹಿಂದೆಂದೂ ಇರಲೂ ಇಲ್ಲ.
ನಿನ್ನನ್ನು ಯಾವ ವೈದ್ಯನೂ ಗುಣಪಡಿಸಲಾರ, ಯಾವ ಕವಿಯೂ ಸಂತೈಸಲಾರ –
ಯಾವುದೋ ಪ್ರೇತರೂಪಿ ನೆರಳು ಹಗಲೂರಾತ್ರಿ ನಿನ್ನನ್ನು ಕಾಡುತ್ತಿದೆ.
ನಾವಿಬ್ಬರೂ ಒಂದು ಅಸಂಭವ ವರ್ಷದಲ್ಲಿ ಸಂಧಿಸಿದೆವು

ಆ ಹೊತ್ತಿಗಾಗಲೇ ಜಗತ್ತಿನ ಶಕ್ತಿ ಉಡುಗಿಹೋಗಿತ್ತು
ಎಲ್ಲ ಕೇಡಿಗೆ ಗುರಿಯಾಗಿ ಸಾವಿನ ಸಂತಾಪದಲ್ಲಿ ಮುಳುಗಿತ್ತು
ಹಾಳಾಗದೆ ಉಳಿದಿದ್ದವೆಂದರೆ ಬರಿಯ ಗೋರಿಗಳಷ್ಟೇ.
ಬೀದಿಯ ದೀಪಗಳಿಲ್ಲದ ನೀವಾ ನದಿಯ ದಡ ಡಾಂಬರು–ಕಪ್ಪಾಗಿತ್ತು
ಆದರ ಸುತ್ತ ಕೆಂಪುಡುರಾತ್ರಿ ಕಾವಲು ಕಾದಿತ್ತು.
ನನ್ನ ಧ್ವನಿ ನಿನ್ನನ್ನು ಕೂಗಿ ಕರೆದದ್ದು ಆಲ್ಲಿ, ಆವಾಗಲೇ!
ಏನಾಯಿತೆಂದು ನನಗೇ ಇನ್ನೂ ಅರ್ಥವಾಗಿಲ್ಲ.
ಯಾವದೋ ತಾರೆ ಕಟ್ಟ ಎಳೆದು ತಂದಂತೆ
ಅಂದಿನ ದುರಂತ ಶರತ್ತನ್ನು ತುಳಿಯುತ್ತ ನೀನು ನನ್ನ ಬಳಿ ಬಂದೆ.
ಆ ಹೊತ್ತಿಗಾಗಲೇ ಎಂದೆಂದಿಗೂ ಪಾಳುಬಿದ್ದ ನನ್ನ ಮನೆಯಿಂದ
ಸುಟ್ಟ ಕವಿತೆಗಳ ಹಕ್ಕಿಗುಂಪು ಹಾರಿಹೋಗಿತ್ತು.

೧೯೫೭

## ‘ಚತುಷ್ಪದಿ–ಮಾಲೆ’ಯಿಂದ

[ ೯೩]

ಅಭ್ಯಾಸಬಲದಿಂದ ನನ್ನ ಪ್ರಿಯಮಿತ್ರರನ್ನು
ಅವರ ಮುದ್ದುಹೆಸರು ಹಿಡಿದು ಕೂಗುತ್ತೇನೆ
ಈ ವಿಚಿತ್ರ ಮುಖಾಮುಖಿಯಲ್ಲಿ ನನಗೆ ಯಾವಾಗಲೂ
ಉತ್ತರ ಕೊಡುವುದೆಂದರೆ ಒಂದೇ – ಮೌನ.

೧೯೭೩

[ ೯೪]

ಭಾವಗೀತೆಗಳದ್ದೊಂದು ವಿಚಿತ್ರ. ಅಲ್ಲಿ ಹೆಜ್ಜೆಹೆಜ್ಜೆಗೂ ರಹಸ್ಯ
ಎಡಕ್ಕೆ, ಬಲಕ್ಕೆ ಬೆಟ್ಟದ ಕೋಡುಗಳು, ಅಗಾಧ ಕೂಪಗಳು
ಕಾಲಕೆಳಗೆ ಮುದುಡಿದ ಎಲೆಯಂತೆ ಬಿದ್ದಿರುವ ಕೀರ್ತಿ
– ಇಷ್ಟು ಸ್ಪಷ್ಟ : ಅದರಿಂದ ನನಗೆ ಬಿಡುಗಡೆಯಿಲ್ಲ.

೧೯೭೭

೯೫.

ಚಿನ್ನ ಕಪ್ಪಿಡುತ್ತದೆ, ಉಕ್ಕಿಗೆ ತುಕ್ಕು ಹಿಡಿಯುತ್ತದೆ
ಅಮೃತಶಿಲೆ ಪುಡಿಪುಡಿಯಾಗುತ್ತದೆ, ಎಲ್ಲಕ್ಕೂ ವಿನಾಶ ಕಾದಿದೆ

ಒಟ್ಟಿನಲ್ಲಿ ಜಗತ್ತಿನಲ್ಲಿ ಗಟ್ಟಿ ಉಳಿಯುವುದೊಂದೇ – ದುಃಖ
ಹಾಗೂ ಈ ದೀರ್ಘಜೀವಿ, ಸಾರ್ವಭೌಮ ಶಬ್ದ!

೧೯೪೫

[೯೬]

ಎಲ್ಲಿಯ ಯುದ್ಧ, ಎಲ್ಲಿಯ ಮಹಾಮಾರಿ – ಎಲ್ಲ ಕೊನೆಗೊಳ್ಳುತ್ತವೆ
ಈಗಾಗಲೇ ಅವುಗಳ ಬಗ್ಗೆ ತೀರ್ಪು ಕೊಟ್ಟಾಗಿದೆ
ಆದರೆ 'ಕಾಲಪ್ರವಾಹ' – ಹಾಗೆಂದು ನಾಮಕರಣಗೊಂಡ ಭೀತಿ –
ಅದರೊಂದಿಗೆ ಸೆಣಸುವುದಾದರೂ ಹೇಗೆ ?

೧೯೬೨

೯೭

ಬಂಗಾರದ ಮಂಜಿನ ಮೂಲಕ
ಹಂಸದೆಡೆಗೆ ತೇಲಿಬಂದಿತ್ತು ಕೀರ್ತಿ.
ಆದರೆ ಎಲೆ ಒಲವೆ, ನೀನು ಮಾತ್ರ
ಯಾವಾಗಲೂ ನನ್ನ ಹತಾಶೆಯಾಗಿಯೇ ಉಳಿದೆ.

೧೯೬೨

## ೯೮. ಕವಿತೆಗೆ

ಕತ್ತಲರಾತ್ರಿ ಉಲ್ಕಾಪಾತದಂತೆ ಬಂದು
ದುರ್ಗಮ ದಾರಿಗಳಲ್ಲಿ ಕೈಹಿಡಿದು ನಡಸಿದೆ, ನಿಜ.
ಆದರೆ ನೀನಾಡಿದುದೆಲ್ಲ ಸುಳ್ಳು, ಕಹಿ
ನೀನೆಂದೂ ನನಗೆ ಸಾಂತ್ವನವಾಗಲಿಲ್ಲ.

೧೯೬೧

## [ ೯೯]

ಏನೂ ಇಲ್ಲದ, ಯಾರೂ ಹೋಗಬಾರದ 'ಅಲ್ಲಿ'ಗೆ ಹೋಗುತ್ತಿದ್ದೇನೆ
ಅಲ್ಲಿನ ಅತ್ಯಂತ ಪ್ರಿಯಸಂಗಾತಿಯೆಂದರೆ – ನೆರಳು
ಅಲ್ಲಿ ದಟ್ಟವಾದ ಕಾಡುಗಳಿಂದ ಗಾಳಿ ಬೀಸಿಬರುತ್ತಿರುತ್ತದೆ
ಕಾಲಕೆಳಗಿರುವುದು ತಣ್ಣನೆಯ ಮೆಟ್ಟಿಲುಗಳು.

೧೯೬೪

೧೦೦

ಗುಡುಗಿನ ಮೊಳಗು ಕೇಳಿದಾಗಲೆಲ್ಲ ನಿನಗೆ ನನ್ನ ನೆನಪಾಗುತ್ತದೆ
ಆಗ ನೀನಂದುಕೊಳ್ಳುತ್ತಿ – ಹೌದು, ಅವಳು ಬಿರುಗಾಳಿ ಬಯಸಿದ್ದಳು...
ದಿಗಂತದ ಅಂಚು ರಕ್ತಗೆಂಪಿಗೆ ತಿರುಗುವಾಗ
ನಿನ್ನ ಹೃದಯದಲ್ಲಿ ಬೆಂಕಿ ಹೊತ್ತಿ ಉರಿಯುತ್ತದೆ –
ಅಲ್ಲಿ ಮಾಸ್ಕೋ ನಗರದಲ್ಲಿ ಆ ದಿನ ಆಗುವಂತೆಯೇ :
ಅವೊತ್ತು ನಾನು ನನ್ನ ಮೆಚ್ಚಿನ ದೂರದ ಆಸರೆಗಳ ದಾರಿ ಹಿಡಿದು
ಎಂದೆಂದಿಗೂ ನಗರ ತೊರೆದು ಹೊರಟುಹೋಗುತ್ತೇನೆ
ಆದರೆ ನನ್ನ ನೆರಳು ಮಾತ್ರ ಸದಾ ನಿನ್ನ ನಡುವೆ ಇರುತ್ತದೆ.

೧೯೬೧

# ೧. ಕನ್ನಡಲಿಪಿಯಲ್ಲಿ ಎರಡು ಮೂಲಕವಿತೆಗಳು

## ಕವಿತೆ ೩

ಸಷಾಲಾ ರೂಕಿ ಪದ್ ಚ್ಯೋಮ್ನೋಯ್ ವುಆಲ್ಯೂ
"ಅತ್‌ಚೆವೂ ತಿ ಸಿವ್ರೋದ್ನ್ಯ ಬ್ಲೆದ್ನಾ?"
— ಅತ್‌ತವ್ರೊ, ಶ್ತೊ ಯ ತೆರ್ಪ್‌ಕೋಯ್ ಪೆಚಾಲ್ಯೂ
ನಪೋಯ್ಲಾ ಇವ್ರೊ ದಪ್ಯಾನಾ

ಕಾಕ್ ಜಾಬೂದು? ಓನ್ ವಿಷ್ಯೋಲ್, ಷತಾಯಸ್
ಇಸ್ಕ್ರಿವಿಲ್ಸ್ಯ ಮುಚೇಚೆಲ್ನಾ ರೋತ್ ...
ಯ ಸ್ಪೆಷಾಲಾ, ಪೇರಿಲ್ ನಿ ಕಸಾಯಸ್,
ಯ ಬೆಷಾಲಾ ಜ ನೀಮ್ ದೋ ವರೋತ್

ಜದಿಹಾಯಸ್, ಯ ಕ್ರಿಕ್ನೂಲ "ಷೂತ್ಕ
ವ್ರೆಸ್ಯ, ಶ್ತೊ ಬಿಲೊ ಉಯಿದ್ಯೋಷ್, ಯ ಉಮ್ರೂ."
ಉಲಿಬ್‌ನೂಲ್‌ಸ್ಯ ಸ್ಪಕೋಯ್ನ ಈ ಷೂತ್ಕ
ಈ ಸ್ಕಜಾಲ್ ಮಿನ್ಯೆ "ನಿ ಸ್ತ್ರೋಯ್ ನ ವೇತ್ರೂ."

೧೯೧೧

## ಕವಿತೆ ೧೦೦

ಉಸ್ಲೀಷಿಷ್ ಗ್ರೋಮ್ ಈ ಪ್ಸ್ರುಮ್‌ನಿಷ್ ಅಬಮ್ನೆ
ಪದೂಮಯೆಷ್ : ಆನಾ ಗ್ರೋಜಿ ಷೆಲಾಲಾ ...
ಪೊಲಸ್ಕ ನ್ಯೇಬ ಬೂಜೆತ್ ತ್ವ್ಯೇರ್ದ–ಅಲೋಯಿ
ಅ ಸೆರ್ದ್ತ್ಸೆ ಬೂಜೆತ್ ಕಾಕ್ ತಗ್ದ, ವ್ ಅಗ್ನೆ.
ಸ್ಲೂಚೇತ್ಸ್ಯ ಏತಾ ಪ್ರೋತ್ ಮಸ್ಕೋವ್‌ಸ್ಕಿ ಜ್ಯೆಸ್
ಕಗ್ದ ಯು ಗೋರದ್ ನವ್‌ಸಿಗ್ದ ಪಕೀನೂ
ಈ ಉಸ್ತ್ರೆಮ್‌ಲ್ಯೂಸ್ ಕ್ ಷೆಲಾನ್ನಮೂ ಪ್ರೀಚೆನೂ,
ಸ್ವಯೂ ಮೆಷ್ ವಾಸ್ ಇಷ್ಯೊ ಅಸ್ತಾವೀವ್ ಚೆನ್.

೧೯೬೧

## ೨. ಟಿಪ್ಪಣಿಗಳು

**೧. 'ರಿಕ್ವಿಯಂ' ('ಶಾಂತಿಗೀತೆ')**

೧. ೧೯೩೫ರಲ್ಲಿ ಕಮ್ಯುನಿಸ್ಟ್ ಪಕ್ಷದ ಮುಖಂಡ ಕಿರೋವ್‌ನ ಕೊಲೆಯ ಪಿತೂರಿಯಲ್ಲಿ ಸೇರಿದ್ದಾನೆಂಬ ಸುಳ್ಳು ಆಪಾದನೆಯ ಮೇಲೆ ಅನಾಳ ಒಬ್ಬನೇ ಮಗ ಲೆವ್‌ನ ಬಂಧನವಾದಾಗ 'ರಿಕ್ವಿಯಂ'ನ ರಚನೆ ಪ್ರಾರಂಭವಾಗಿ ೧೯೪೦ರವರೆಗೂ ನಡೆಯಿತು. 'ತಲೆಕಟ್ಟಿನ ವಾಕ್ಯ', 'ಮುನ್ನುಡಿಯ ಬದಲು' ನಂತರ ಸೇರಿಸಿದ್ದು.

೨. ತಲೆಕಟ್ಟಿನ ವಾಕ್ಯಗಳು ಅನಾಳದೇ. ಮುಂದೆ ೧೯೬೧ರಲ್ಲಿ ಬರೆದ ಒಂದು ಕವಿತೆಯ ಚರಣ.

೩. ಮುನ್ನುಡಿಯ ಬದಲು
'ಯೆಷೋವ್‌ನ ಆಳಿಕೆ' – ನಿಕೊಲಯ್ ಯೆಷೋವ್ ೧೯೩೬–೩೮ರಲ್ಲಿ ಸ್ತಾಲಿನ್‌ನ ಗುಪ್ತಚರ ವಿಭಾಗದ ಮುಖ್ಯಾಧಿಕಾರಿಯಾಗಿದ್ದ. ರಷ್ಯದಲ್ಲಿ ಬುದ್ಧಿಜೀವಿಗಳ ನರಮೇಧ ತುತ್ತತುದಿ ಮುಟ್ಟಿದ್ದು ಇವನ ಕಾಲದಲ್ಲಿಯೇ.

೪. ಸಮರ್ಪಣೆ
'ನೀವಾ' (ಅಥವಾ ನೇವಾ) – ಲೆನಿನ್‌ಗ್ರಾಡ್‌ನ ನದಿ.

೫. ಪೀಠಿಕೆ
'ಬ್ಲ್ಯಾಕ್ ಮಾರಿಯಾ' – ರಷ್ಯದಲ್ಲಿ ಬಂದಿಗಳನ್ನು ಸಾಗಿಸುತ್ತಿದ್ದ ಕಪ್ಪುಬಣ್ಣದ ಪೊಲೀಸ್ ಗಾಡಿ. ಈಗ ಜಾತಿವಾಚಕ ಶಬ್ದವಾಗಿ ಎಲ್ಲೆಲ್ಲೂ ಅಂತಹ ಗಾಡಿಗಳನ್ನು ಆ ಹೆಸರಿನಿಂದ ಕರೆಯಲಾಗುತ್ತದೆ.

೬. I. ಅನಾಳ ಮೂರನೆಯ ಗಂಡ ನಿಕೊಲಯ್ ಪ್ಯೂನಿನ್‌ನನ್ನು ೧೯೩೫ರಲ್ಲಿ ಬಂಧಿಸಿ ಕರೆದೊಯ್ದಾಗ ಬರೆದದ್ದು. ಅದೇ ವರ್ಷ ಮಗ ಲೆವ್ ಸಹ ಬಂಧಿತನಾಗಿದ್ದ.
'ಸ್ತ್ರೆಲ್ಟ್ಸಿ' – 'ಮಹಾಭಯಂಕರ'ನೆನಿಸಿಕೊಂಡ ರಷ್ಯದ ಇವಾನ್ ('ಇವಾನ್ ದಿ ಟೆರಿಬಲ್') ಕಟ್ಟಿದ್ದ ಸಿಪಾಯಿಪಡೆಯ ಹೆಸರು. ಮುಂದೆ ಮೊದಲನೆಯ ಪೀಟರ್ ಅವರನ್ನು ಸೋಲಿಸಿ ಅವರಲ್ಲಿ ಎಂಟುನೂರು ಜನರ ನಿರ್ನಾಮ ಮಾಡಿದಾಗ ಆ ಸಿಪಾಯಿಗಳ ಹೆಂಡಂದಿರು ಅರಮನೆಯ ಕೋಟೆಗೋಡೆಗಳ ಮುಂದೆ ಒಟ್ಟಾಗಿ ಹುಯಿಲು ಹಾಕಿದ್ದರು.

'ಕ್ರೆಮ್ಲಿನ್' – 'ಕ್ರೆಮ್ಲ್' ಅಂದರೆ ಕೋಟೆ, ದುರ್ಗ. ಮುಖ್ಯವಾಗಿ ಮಾಸ್ಕೋ ದಲ್ಲಿರುವ ಸರಕಾರದ ಕೇಂದ್ರಕಚೇರಿಯನ್ನು ಈ ಹೆಸರಿನಿಂದ ಕರೆಯುತ್ತಾರೆ.

೭. II. 'ದೋನ್' – ದಕ್ಷಿಣಪೂರ್ವ ರಷ್ಯದ ಪ್ರಮುಖ ನದಿ.
'ಟೋಪಿ ಓರೆಮಾಡಿಕೊಂಡು' – ರಷ್ಯದಲ್ಲಿ ಚೌತಿಯ ಚಂದ್ರ ವರ್ತುಳದ ಮೇಲುಭಾಗದ ಬಲಮೂಲೆಗಿದ್ದು, ಓರೆಟೋಪಿಯಂತೆ ಕಾಣುತ್ತಾನೆ. ಇದೊಂದು ಉತ್ತರದೇಶಗಳಲ್ಲಿನ ನೈಸರ್ಗಿಕ ವಿಶೇಷ.

೮. IV. 'ತ್ಸಾರ್‌ಸ್ಕೋಯೆ ಸೆಲೊ' – ಲೆನಿನ್‌ಗ್ರಾದ್ ಸಮೀಪದ ಒಂದು ಹಳ್ಳಿ, ಹಿಂದೆ ರಷ್ಯದ ದೊರೆಗಳ ಬೇಸಿಗೆಯ ನಿವಾಸವಾಗಿತ್ತು. ಆನಾ ಮತ್ತು ಭಾವೀಗಂಡ ಗುಮಿಲ್ಯೊವ್ ಅವರ ಬಾಲ್ಯವನ್ನು ಕಳೆದದ್ದು ಇಲ್ಲಿಯೇ. ಆನಾ ಇದರ ಬಗ್ಗೆ ಹಲವಾರು ಕವಿತೆ ಬರೆದಿದ್ದಾಳೆ.
'ಕೈಯಲ್ಲಿ ಕಟ್ಟುಹಿಡಿದು' – ಬಂದಿಗಳನ್ನು ನೋಡಬರುವವರು ತರುವ ತಿಂಡಿ ಮುಂತಾದ ಸಾಮಾನುಗಳ ಕಟ್ಟು
'ಶಿಲುಬೆಗಳಡಿ' – ಲೆನಿನ್‌ಗ್ರಾದ್‌ನ ಸೆರೆಮನೆಯ ಭೂನಕ್ಷೆ ಶಿಲುಬೆಗಳನ್ನು ಹೋಲುತ್ತದೆ. ಇಲ್ಲಿ ಏಸುಕ್ರಿಸ್ತ ಶಿಲುಬೆಯಡಿ ಅನುಭವಿಸಿದ ಯಾತನೆಯ ಸಂಕೇತವೂ ಇದೆ.

೯. VI. 'ಶ್ವೇತರಾತ್ರಿಗಳು' – ರಷ್ಯದ ಉತ್ತರಭಾಗದಲ್ಲಿ ಜೂನ್ ತಿಂಗಳಲ್ಲಿ ಕೆಲವು ದಿನ ಸೂರ್ಯ ಮುಳುಗುವುದೇ ಇಲ್ಲ, ಇಡೀ ರಾತ್ರಿ ಬೆಳಕಾಗಿರುತ್ತದೆ. ಇದೊಂದು ಪ್ರಕೃತಿವಿಶೇಷ.

೧೦. VIII. 'ಯೆನಿಸೆಯ್' – ಶಿಕ್ಷೆಗೆ ಗುರಿಯಾದ ಬಂದಿಗಳ ಶ್ರಮಶಿಬಿರವಿರುತ್ತಿದ್ದ ಸೈಬೀರಿಯಾದ ಪ್ರಮುಖನದಿ.

೧೧. X. 'ನನಗಾಗಿ ಅಳಬೇಡಮ್ಮ' – ರಷ್ಯದ ಪ್ರಾಚೀನ ಪರಂಪರೆಯ ಚರ್ಚುಗಳಲ್ಲಿ ಈಸ್ಟರ್ ಹಬ್ಬದಂದು ಹಾಡುವ ಗೀತೆಯ ಭಾಗ, ಏಸುಕ್ರಿಸ್ತ ತಾಯಿ ಮೇರಿಗೆ ಹೇಳಿದಂತೆ. ಇಲ್ಲಿ ಆನಾ ಅದನ್ನು ಸಾವಿನ ಗಳಿಗೆಯನ್ನು ಎದುರುನೋಡುತ್ತಿರುವ ತನ್ನ ಮಗನಿಗೂ ತನಗೂ ಅನ್ವಯಿಸಿಕೊಳ್ಳುತ್ತಾಳೆ.

**೨. 'ಸಂಜೆ' ('ವೇಚರ್')**

೧೨. ಕ. ೧. 'ತುಪ್ಪಳದಂಗಿ' – 'ಅರ್ಮಿನ್ ಮ್ಯಾಂಟಲ್'. ಯುರೋಪಿನಲ್ಲಿ ನ್ಯಾಯಾಧೀಶರು ನ್ಯಾಯಪೀಠದಲ್ಲಿರುವಾಗ 'ಅರ್ಮಿನ್' ಎಂಬ ಪ್ರಾಣಿಯ

ತುಪ್ಪಳದಿಂದ ಮಾಡಿದ ಮೇಲಂಗಿಯನ್ನು ತೊಡುತ್ತಾರೆ. ಆ ಕಾರಣ, ಅದು ನ್ಯಾಯದ ಸಂಕೇತವಾಗಿದೆ.

೧೩. ಕ. ೮. ಅನೆನ್‌ಸ್ಕಿ, ಇನ್ನೊಕೆಂಟಿ (೧೮೫೬–೧೯೦೯) – ಕವಿ, ವಿದ್ವಾಂಸ. ಆನಾಳ ಕಾವ್ಯಗುರು. ಸಮಕಾಲೀನ ಆಕ್ಮಿಯಿಸ್ಟ್ ಕವಿಗಳಿಗೆಲ್ಲ ಅವನ ಕಾವ್ಯಶೈಲಿ ಮಾರ್ಗದರ್ಶಕವಾಗಿತ್ತು.

೧೪. ಕ. ೯. 'ಒಲವು' – ಪ್ರೇಮದ ಲಕ್ಷಣಗಳನ್ನು ವಿವರಿಸುವ ಈ ಕವಿತೆ ಆನಾಳ ಮೊದಲ ಕವಿತೆಯಲ್ಲವಾದರೂ ಅವಳ ಮೊದಲ ಸಂಗ್ರಹ 'ಸಂಜೆ'ಯಲ್ಲಿ ಹಾಗೂ ಸಾಧಾರಣವಾಗಿ ಇತರೆಲ್ಲ ಸಂಕಲನಗಳಲ್ಲಿ ನಾಂದೀಪದ್ಯವಾಗಿ ಅಚ್ಚಾಗಿದೆ.

## ೩. 'ಜಪಮಾಲೆ' ('ಚ್ಯೋತ್ಕಿ')

೧೫. ಕ. ೧೨. 'ತ್ವೆರ್' – ಮಾಸ್ಕೋಗೆ ಸುಮಾರು ಎಪ್ಪತ್ತು–ಎಂಬತ್ತು ಮೈಲಿ ಉತ್ತರಕ್ಕಿರುವ ಪ್ರದೇಶ. ಈಗ ಇದರ ಹೆಸರು 'ಕಲೀನಿನ್' ಎಂದಾಗಿದೆ. ಗುಮಿಲ್ಯೊವ್‌ನ ತಾಯಿಯ ಮನೆ ಇಲ್ಲಿತ್ತು. ಅವನು ದೇಶವಿದೇಶ ತಿರುಗುತ್ತಿದ್ದಾಗ ಆನಾ ಇಲ್ಲಿರುತ್ತಿದ್ದಳು. ಮಗ ಲೆವ್ ಹುಟ್ಟಿದ್ದು ಇಲ್ಲಿಯೇ.

೧೬. ಕ. ೧೩. ಈ ಕವಿತೆಯಲ್ಲಿ ಆನಾ ತನ್ನನ್ನು ಜನಪ್ರಿಯ ಫ್ರೆಂಚ್ ಜಾನಪದ ಕತೆಯ ಸಿಂಡರೆಲಾಗೆ ಹೋಲಿಸಿಕೊಂಡು ಅವಳಂತೆ ಪ್ರೇಮದಲ್ಲಿ ಯಶಸ್ವಿಯಾಗುವ ಬದಲು ವಿಫಲಳಾದಂತೆ ಚಿತ್ರಿಸಿದ್ದಾಳೆ.

೧೭. ಕ. ೧೪. ಇದು ಕವಿಸಾಹಿತಿಗಳು ಸೇರುತ್ತಿದ್ದ ಅಂದಿನ ಪೀಟರ್ಸ್‌ಬರ್ಗ್‌ನ 'ದಿ ಸ್ಟ್ರೇ ಡಾಗ್' ನಾಟ್ಯಗೃಹದ ಚಿತ್ರ. ಕವಿತೆಯ ಕೊನೆಗೆ ಬರುವ 'ಕುಣಿಯುತ್ತಿರುವ ಹೆಣ್ಣು' ಆನಾಳ ಗೆಳತಿ, ಪ್ರೇಮದಲ್ಲಿ ಪ್ರತಿದ್ವಂದಿ, ಚೆಲುವೆ–ನಟಿ ಗ್ಲೆಬೋವಾ ಸುದೇಯ್ಕಿನಾ. 'ಗೋಡೆಯ ಮೇಲಿನ ಹೂಗಳೂ, ಹಕ್ಕಿಗಳೂ...' – ಇದು ಕೃತಕಜೀವನ ತೊರೆದು ನಿಜಜೀವನ ನಡಸುವ ಹಂಬಲಕ್ಕೆ ಪ್ರತಿಮೆಯಾಗಿ ಬಂದಿದೆ.

## ೪. 'ಬೆಳ್ಳಕ್ಕಿ ಹಿಂಡು' ('ಬೇಲಯಾ ಸ್ತಾಯಾ')

೧೮. ಕ. ೧೭. ಆನಾಳ ಮಗ ಲೆವ್ ಬಾಲ್ಯದಿಂದಲೂ ತಾಯಿಯಿಂದ ದೂರ ಅಜ್ಜಿಯ ಮನೆಯಲ್ಲಿ ಬೆಳೆದ. ಆ ಕಾರಣ, ಅವಳು ತಾಯಿಯಾಗಿಯೂ ಮಕ್ಕಳಿಲ್ಲದಂತಾಗಿದ್ದಳು. ಇದು ಕವಿತೆಯ ಹಿನ್ನೆಲೆ.

೧೯. ಕ. ೧೯. ಇಲ್ಲಿ ಎಂಟು ಸಾಲುಗಳಲ್ಲಿ ಎರಡು ಪ್ರೇಮ–ಪ್ರಸಂಗಗಳ ಕತೆಯಿದೆ. ಹಳೆಯ ಪ್ರೇಮ – ಕತ್ತಲ ದಾರಿ, ಹಳದಿಗೆ ಉರಿಯುತ್ತಿರುವ ಹೊಸ ದಾರಿದೀಪಗಳು – ಹೊಸಪ್ರೇಮ – ಹೀಗೆ ವಿಷಯ ಪರಿಣಾಮಕಾರಿಯಾಗಿ ಪ್ರತಿಮೆಗಳಲ್ಲಿ ಬದಲಾಗಿದೆ.

೨೦. ಕ. ೨೦. 'ಜುಲೈ ೧೯೧೪' – ಮೊದಲ ಯುದ್ಧ ಷುರುವಾದ ಮರುದಿನವೇ ಅದರಿಂದ ಆಗುವ ಅನಾಹುತಗಳ ಬಗ್ಗೆ ಎಚ್ಚರಿಕೆ ಕೊಟ್ಟು ಬರೆದ ಕವಿತೆಗಳು ಇವು. ಎರಡನೆ ಕವಿತೆಯ ಕೊನೆಯೆರಡು ಸಾಲುಗಳಲ್ಲಿ ಆನಾ ತನ್ನ ದೇಶವನ್ನು ಏಸುಕ್ರಿಸ್ತನ ದೇಹಕ್ಕೆ ಹೋಲಿಸಿದ್ದಾಳೆ.

೨೧. ಕ. ೨೧. ಪೀಟರ್ಸ್‌ಬರ್ಗ್ ನಗರವನ್ನು ಕುರಿತದ್ದು. ಆನಾಳ ಕವಿತೆಯ ಪ್ರಧಾನ ವಿಷಯಗಳಲ್ಲಿ ಇದೂ ಒಂದು.

೨೨. ಕ. ೨೩. ಇದೂ ಪೀಟರ್ಸ್‌ಬರ್ಗ್ ಕುರಿತದ್ದೇ. ಅದರ ಬಗ್ಗೆ ವ್ಯಥೆ, ಮೋಹ ಎರಡೂ ಕಾಣುತ್ತವೆ.

೨೩. ಕ. ೨೪. ಯುದ್ಧಕಾಲದ ಭಾವನೆ ಇದರ ವಿಷಯ.
'ಆನೆನ್‌ಸ್ಕಿ' – ಮೇಲೆ ಟಿಪ್ಪಣಿ ೧೩ನ್ನು ನೋಡಿ.

೨೪. ಕ. ೨೯. ಆನಾ ಈ ಕವಿತೆಯಲ್ಲಿ ಒಂದು ವಿಶಿಷ್ಟತತ್ವವನ್ನು ಪ್ರತಿಪಾದಿಸಿದ್ದಾಳೆ – "ನಮ್ಮೊಳಗಿನ ಇನ್ನೊಬ್ಬರ ನೆನಪು ಅವರ ಬದಲಾದ ರೂಪ. ದೇಹವಿಲ್ಲದಿದ್ದರೂ ಅದು ಪ್ರಜ್ಞೆಯಿಂದ ಕೂಡಿದೆ. ಆ ನೆನಪೊಂದು ಅದ್ಭುತ. ಅದು ನಮಗೆ ದುಃಖದಷ್ಟೇ ಸುಖವನ್ನೂ ಕೊಡುತ್ತದೆ."

೨೫. ಕ. ೩೧. ದೊರೆ ಡೇವಿಡ್. ಕ್ರಿ. ಪೂ. ಹತ್ತನೆ ಶತಮಾನದ ಸುಮಾರಿಗೆ ಇಸ್ರೇಲನ್ನು ಆಳಿದ ಯೆಹೂದೀ ದೊರೆ, ಅನೇಕ ಪ್ರಾರ್ಥನಾಗೀತೆಗಳ ಕರ್ತೃ ಎಂದು ನಂಬಿಕೆ. ಮಾಸ್ತಿಯವರು ೧೯೩೩ರಷ್ಟು ಹಿಂದೆಯೇ ತಮ್ಮ 'ವಿಮರ್ಶೆ' ಗ್ರಂಥದ ಮೂರನೆ ಸಂಪುಟದಲ್ಲಿ 'ಡೇವಿಡ್ ಮಹಾರಾಜನ ಕೀರ್ತನೆಗಳು' ಎಂಬ ಪ್ರಬಂಧದಲ್ಲಿ ಕೆಲವು ಗೀತೆಗಳ ಅನುವಾದದೊಂದಿಗೆ ಅವನ ಪರಿಚಯ ಮಾಡಿಕೊಟ್ಟಿದ್ದಾರೆ.

೨೬. ಕ. ೩೨. ವಿವಾಹವಿಚ್ಛೇದನಗೆ ಮುನ್ನ ಗಂಡ ಗುಮಿಲ್ಯೊವ್‌ನಿಂದ ಬೇರೆ ಇರತೊಡಗಿದಾಗ ಬರೆದ ಕವಿತೆ.

## ೫. 'ಗುಬ್ಬಚ್ಚಿಬಾಳೆ' ('ಪದ್‌ರೋಷ್ನಿಕ್')

೨೭. ಕ. ೩೪. ೧೯೧೭ ರ ಕ್ರಾಂತಿಕಾಲದ ಒಂದು ದಾರುಣ ಚಿತ್ರ.

೨೮. ಕ. ೩೫. 'ದಿ ಸ್ಟ್ರೇ ಡಾಗ್' ಕಾಲದ (ಟಿಪ್ಪಣಿ ೧೭ ನೋಡಿ) ಆನಾಳ ಯೌವನದ ದಿನಗಳಲ್ಲಿ ಅವಳ ಭಾವಲೋಕಕ್ಕೆ ತೀರಾ ಹತ್ತಿರವಾಗಿದ್ದು ಅವಳ ಪ್ರೀತಿಯ ಬೇಟೆಯಾಗಿದ್ದವರಲ್ಲಿ ಬೋರಿಸ್ ಆನ್‌ರೆಪ್ ಮುಖ್ಯನಾದವನು. ಕ್ರಾಂತಿಯ ಹೊತ್ತಿನಲ್ಲಿ ಇತರ ಅನೇಕ ಬುದ್ಧಿಜೀವಿ–ಕಲಾವಿದರಂತೆ ದೇಶ ಬಿಟ್ಟುಹೋದ. ಈ ಕವಿತೆ ಅವನನ್ನು ಕುರಿತು ಬರೆದದ್ದು, ಅವನು ಬಂದು ತನ್ನನ್ನು ಕಾಡುತ್ತಿದ್ದಾನೆಂದು ಕಲ್ಪಿಸಿ.
'ಪಚ್ಚೆದ್ವೀಪ' – ಇಂಗ್ಲೆಂಡ್.

೨೯. ಕ. ೩೬. ದೇಶದ ಸ್ಥಿತಿ ಎಷ್ಟೇ ಅಸಹನೀಯವಾಗಿದ್ದರೂ ಪರದೇಶಗಳ ಆಶ್ರಯ ಬಯಸುವುದು ಹೇಯವೆಂದು ಒತ್ತಿಹೇಳುವ ಆನಾಳ ಸುಪ್ರಸಿದ್ಧ ಕವಿತೆ ಇದು. ಸರಕಾರ ಇದರ ಮೊದಲ ಎಂಟು ಸಾಲುಗಳನ್ನು ಬಿಟ್ಟು ತನ್ನ ಸಂಕಲನಗಳಲ್ಲಿ ಉಪಯೋಗಿಸಿಕೊಳ್ಳುತ್ತಿತ್ತು. ಆ ವರ್ಜಿತ ಭಾಗ ಇಂದಿನ ಗ್ಲಾಸ್‌ನಸ್ತ್‌ನ ದಿನಗಳಲ್ಲಿಯೂ ಕಾಣಸಿಗುವುದು ಕಷ್ಟ (ಕ. ೪೫ನ್ನೂ ನೋಡಿ).

## ೯. 'ಕ್ರಿಸ್ತೋತ್ತರ ೧೯೨೧' ('ಆನೊ ದಾಮಿನಿ ೧೯೨೧')

೩೦. ಕ. ೩೯. ಪೀಟರ್ಸ್‌ಬರ್ಗ್‌ನ 'ದಿ ಸ್ಟ್ರೇ ಡಾಗ್' ನಂತಹ ಸ್ಥಳಗಳ ಸ್ವೇಚ್ಛೆಯ ಸಂಜೆಬದುಕಿನ ಬಗ್ಗೆ ಒಲವು, ಮೆಚ್ಚಿಗೆ ; ಅದಕ್ಕೆ ವ್ಯತಿರಿಕ್ತವಾದ ನೇಮದ ಬದುಕಿನ ಬಗ್ಗೆ ಆತಂಕ, ತಿರಸ್ಕಾರ; ಸ್ವೇಚ್ಛೆಯಿಂದ ಬದುಕಿದ್ದಕ್ಕೆ 'ಸಭ್ಯ' ಸಮಾಜದಿಂದ ಎದುರಿಸಬೇಕಾಗಿ ಬಂದ ಅಪವಾದ; ಅಂತಿಮವಾಗಿ ಯಾವದು ಸರಿಯೆಂಬ ಪ್ರಶ್ನೆ – ಇವು ಕವಿತೆಯ ವಸ್ತು (ಕ. ೧೪ರ ಟಿಪ್ಪಣಿಯನ್ನೂ ನೋಡಿ).

೩೧. ಕ. ೪೨. ಆ ಕಾಲದ ಎಲ್ಲ ಬುದ್ಧಿಜೀವಿಗಳಂತೆ ಆನಾಳ ಮನಸ್ಸಿನಲ್ಲಿಯೂ ಕ್ರಾಂತಿಯ ಬಗ್ಗೆ ದ್ವಂದ್ವದ ಭಾವನೆಯಿತ್ತು. ಕ್ರಾಂತಿಯ ಕಾಲದಲ್ಲಿ ಅದರ ವಿರುದ್ಧ ಬರೆದವಳೇ (ಕ. ೩೩, ೩೪, ೩೫ನ್ನು ನೋಡಿ) ಕ್ರಾಂತಿಯ ನಂತರ ಹೊಸ ಆಶಾಕಿರಣವನ್ನು ಕಂಡು ಬರೆದ ಕವಿತೆ ಇದು.

೩೨. ಕ. ೪೩. 'ಚೆಷೆತ್ಸ್ಕ' – ರಷ್ಯದ ತ್ವೆರ್ (ಮೇಲೆ ಟಿಪ್ಪಣಿ ೧೫ನ್ನು ನೋಡಿ) ಪ್ರಾಂತ್ಯದಲ್ಲಿನ ಹದಿನೆಂಟನೆ ಶತಮಾನದ ಚರ್ಚುಗಳಿಗೆ ಹೆಸರಾದ ನಗರ.

ಗುಮಿಲ್ಯೊವ್‌ನ ತಾಯಿಯ ಊರಿದ್ದದ್ದು ಇದರ ಸಮೀಪದಲ್ಲಿಯೇ. ಆನಾ ಗಂಡ, ಮಗುವಿನೊಂದಿಗೆ ಇಲ್ಲಿನ ಚರ್ಚುಗಳಿಗೆ ಹೋಗಿಬರುತ್ತಿದ್ದಳು. ಇದನ್ನು ಬರೆಯುವ ಹೊತ್ತಿಗಾಗಲೇ ಗಂಡನ ಹತ್ಯೆಯಾಗಿದ್ದು, ಈಗ ಚರ್ಚು ಅವನ ನೆನಪುಕ್ಕಿಸುತ್ತದೆ. ಆ ದುಃಖದಲ್ಲಿ ತನ್ನ ದುರಂತಕ್ಕೆ ದೇವರೇ ಕಾರಣನೆಂದು ಬೊಟ್ಟುಮಾಡಿ ತೋರಿಸಿದಂತೆ ಅವಳಿಗೆ ಚರ್ಚಿನ ಪ್ರವೇಶ ಮಾಡುವುದು ಸಹ ಬೇಕಾಗುವುದಿಲ್ಲ.

೩೩. ಕ. ೪೪. ಗಂಡನ ಹತ್ಯೆಯನ್ನು ಕುರಿತು ಬರೆದದ್ದು. ಆನಾ ಇದನ್ನು ಅವನ ಹತ್ಯೆಯಾದ ವರ್ಷವೇ ಬರೆದರೂ ಸರಕಾರದ ಕಣ್ಣು ತಪ್ಪಿಸಲೆಂದು ೧೯೨೧ ರ ಬದಲು ೧೯೧೪ ಎಂದು ತಾರೀಕು ಹಾಕುತ್ತಿದ್ದಳು, ಕ್ರಾಂತಿಪೂರ್ವದ ತ್ಸಾರ್‌ನ ಆಡಳಿತದಲ್ಲಿ ಕೊಲೆಯಾದ ಯಾವನೋ ಪ್ರಿಯತಮನನ್ನು ಕುರಿತು ಬರೆದದ್ದಂಬಂತೆ! ಇದೇ ರೀತಿ ಸರಕಾರ ಸಹ ತನಗೆ ಉಪಯುಕ್ತವಾಗುವ ಕೆಲವೊಂದು ಕವಿತೆಗಳನ್ನು ಅವುಗಳನ್ನು ಬರೆದ ಸಂದರ್ಭ ತಿಳಿಯದಿರಲೆಂದು ತಪ್ಪು ತಾರೀಕು ಹಾಕಿ, ತನ್ನ ಸಂಕಲನಗಳಲ್ಲಿ ಉಪಯೋಗಿಸುತ್ತಿತ್ತು. ಈ ಕಣ್ಣುಮುಚ್ಚಾಲೆಯಾಟ ಎರಡೂ ಕಡೆಯಿಂದ ನಡೆಯುತ್ತಿತ್ತು.

## ೭. 'ಹೊಳೆಜೊಂಡು' ('ತ್ರಸ್ನೀಕ್')

೩೪. ಕ. ೪೬. ದಾಂತೆ ಅಲಿಘೀರಿ (೧೨೬೫ – ೧೩೨೧) – ಇಟಲಿಯ ಫ್ಲಾರೆನ್ಸ್ ನಗರದ ಕವಿ. ಅವನ 'ಡಿವೈನ್ ಕಾಮಿಡಿ' ಜಗತ್ತಿನ ಮಹಾಕಾವ್ಯಗಳಲ್ಲೊಂದು ಎನಿಸಿಕೊಂಡಿದೆ. 'ಇನ್‌ಫರ್ನೊ' ('ನರಕ') ಅದರ ಮೊದಲ ಭಾಗ.

೩೫. ಕ. [೪೯]. ಈ ಕವಿತೆಯಲ್ಲಿ ರೋಮಿನ ಪಾಂತಿಯಸ್ ಪಿಲಾತ ಕ್ರಿಸ್ತನನ್ನು ಶಿಲುಬೆಗೇರಿಸುವ ತೀರ್ಪು ಕೊಟ್ಟದ್ದು ಹಾಗೂ ಷೇಕ್ಸ್ಪಿಯರ್‌ನ 'ಮ್ಯಾಕ್‌ಬೆತ್'ನಲ್ಲಿ ಲೇಡಿ ಮ್ಯಾಕ್‌ಬೆತ್ ಡಂಕನ್ ದೊರೆಯನ್ನು ಕೊಂದದ್ದು – ಇವುಗಳ ಸೂಚನೆಯಿದ್ದು ಸ್ತಾಲಿನ್‌ನ ದಬ್ಬಾಳಿಕೆಯಲ್ಲಿ ನಡೆಯುತ್ತಿದ್ದ ಹತ್ಯಾಕಾಂಡಗಳ ಕಟುವಾದ ಟೀಕೆಯಿದೆ.

೩೬. ಕ. [೫೦]. 'ಪಾಪವಿಮೋಚನಾರ್ಥಿಗಳ...' – ರೋಮನ್ ಕ್ಯಾಥಲಿಕ್‌ರಲ್ಲಿ ಪಾಪಾತ್ಮರು ಪಶ್ಚಾತ್ತಾಪರೂಪವಾಗಿ ಕೈಗೊಳ್ಳುವ ಒಂದು ಧಾರ್ಮಿಕ ಕ್ರಿಯೆ.

೩೭. ಕ. ೫೧. ಮೇಲೆ ಟಿಪ್ಪಣಿ ೩೪, ೩೬ ನೋಡಿ. ಕವಿ ದಾಂತೆ ಯೋಧ ಸಹ. ಇಟಲಿಯ ಫ್ಲಾರೆನ್ಸ್ ಮತ್ತು ಪೀಸಾ ನಗರಗಳ ನಡುವೆ ಯುದ್ಧವಾದಾಗ ಅವನು ತನ್ನೂರಾದ ಫ್ಲಾರೆನ್ಸ್‌ನ ಪರ ಕಾದುತ್ತಾನೆ. ಫ್ಲಾರೆನ್ಸ್‌ಗೆ ಜಯವಾಗಿ,

ದಾಂತೆಗೆ ಉಚ್ಚಪದವಿ ದೊರೆಯುತ್ತದೆ. ಒಮ್ಮೆ ಫ್ಲಾರೆನ್ಸ್‌ನ ರಾಯಭಾರಿಯಾಗಿ ರೋಮ್‌ನಲ್ಲಿರುವಾಗ ಫ್ಲಾರೆನ್ಸ್‌ನಲ್ಲಿ ಅಂತರ್ಯುದ್ಧವಾಗಿ ಬೇರೊಂದು ಬಣಕ್ಕೆ ಅಧಿಕಾರ ದಕ್ಕುತ್ತದೆ. ಆ ಬಣ ಎದುರುಬಣದ ಅಧಿಕಾರಿಗಳನ್ನೆಲ್ಲ ಕಠೋರವಾಗಿ ದಂಡಿಸುತ್ತದೆ. ಹೀಗಾಗಿ ದಾಂತೆ ದೇಶಭ್ರಷ್ಟನಾಗುತ್ತಾನೆ. ಅವನು ಫ್ಲಾರೆನ್ಸ್‌ಗೆ ಹಿಂದಿರುಗುವುದೇ ಇಲ್ಲ. ಊರಿಂದೂರಿಗೆ ಯಾತ್ರಿಯಂತೆ, ತಿರುಕನಂತೆ ಅಲೆಯುತ್ತ ಹುಟ್ಟೂರನ್ನು ನೆನೆಯುತ್ತ ರವೆನ್ನಾ ನಗರದಲ್ಲಿ ಸಾಯುತ್ತಾನೆ. ಫ್ಲಾರೆನ್ಸ್ ಅವನ ಸಾವಿನ ಶೋಕದಲ್ಲಿ ಭಾಗವಹಿಸುವುದಿಲ್ಲ. ಅದು ಮುಂದೆ ಪಶ್ಚಾತ್ತಾಪಪಟ್ಟು ದಾಂತೆಯ ಅವಶೇಷಗಳಿಗೆ ಬೇಡಿದಾಗ ರವೆನ್ನಾ ನಿರಾಕರಿಸುತ್ತದೆ. ಈ ಕವಿತೆಯಲ್ಲಿ ಆನಾ ತನ್ನನ್ನು ತಾನು ದಾಂತೆಯಲ್ಲಿ ಗುರುತಿಸಿಕೊಂಡು, ರಷ್ಯದ ಸರಕಾರವನ್ನು ಅಪ್ರತ್ಯಕ್ಷವಾಗಿ ನಿಂದಿಸಿದ್ದಾಳೆ.
‘ಸ್ಯಾನ್ ಗಿವೊನ್ನಿ’ – ಕ್ರೈಸ್ತಮತದ ಸಂತ. ಫ್ಲಾರೆನ್ಸ್‌ನಲ್ಲಿ ಆ ಸಂತನ ಚರ್ಚಿದೆ. ದಾಂತೆಗೆ ನಾಮಕರಣವಾದದ್ದು ಅಲ್ಲಿಯೇ.

೩೮. ಕ. [೫೨]. ಆನಾ ೧೯೩೭ ರಲ್ಲಿ ಬರೆದ ಎರಡೇ ಕವಿತೆಗಳಲ್ಲಿ ಇದೊಂದು, ಲೆನಿನ್‌ಗ್ರಾದ್‌ನ ದುರವಸ್ಥೆಯನ್ನು ಕುರಿತದ್ದು, ಇತ್ತೀಚಿನವರೆಗೂ ಪ್ರಕಟವಾಗದೆ ಬಾಯಿಂದ ಬಾಯಿಗೆ ಹರಡುತ್ತಿತ್ತು. ಸ್ತಾಲಿನ್‌ನ ದಬ್ಬಾಳಿಕೆಯಲ್ಲಿ ದಂಡನೆಗೆ ಗುರಿಯಾದವರನ್ನು ‘ಶ್ರಮಶಿಬಿರ’ಗಳಿಗೆ ಸಾಗಹಾಕುತ್ತಿದ್ದದ್ದು ಆ ಮಹಾನಗರದಿಂದ. ‘ಚಿತಾ’, ‘ಇಷ್ಟಿಮ್’ ಇತ್ಯಾದಿ ಹೆಸರುಗಳು ಕಾಲ್ಪನಿಕ; ಸನ್ನಿವೇಶಕ್ಕೆ ಸಮಾನವಾದ ಭಯಹುಟ್ಟಿಸುವ ಧ್ವನಿಯುಳ್ಳವು. ಹನ್ನೊಂದನೆ ಸಾಲಿನ ‘ಅವನು’ ಕವಿತೆ ಅರ್ಪಿತವಾಗಿರುವ ಕವಿ ಮ್ಯಾಂದಲ್‌ಷ್ತಾಮ್. ಅವನು ಸತ್ತದ್ದೂ ಶ್ರಮಶಿಬಿರದಲ್ಲಿಯೇ.
‘ನಮ್ಮಗಳ ಪಾಪ – ಮ್ಯಾಂದಲ್‌ಷ್ತಾಮ್‌ನನ್ನು ಉಳಿಸಲಾಗದ್ದು.
‘ನಿನ್ನದು’ – ಕಂಡಂತೆಯೇ ಸ್ತಾಲಿನ್ ಇರಬೇಕು.

೩೯. ಕ. ೫೩. ಪ್ರಾಯಶಃ ಇದು ೧೯೪೦ರಲ್ಲಿ ತೀರಿಕೊಂಡ ಮಿಹಾಯಿಲ್ ಬುಲ್ಗಕೋವ್‌ನ ಸಾವಿನ ನಂತರ ಬರೆದದ್ದಿರಬೇಕು. ಅವನ ಬಗ್ಗೆ ಕ. ೬೦ ರ ಟಿಪ್ಪಣಿ ನೋಡಿ.

## ೮. ‘ಸಪ್ತಮಗ್ರಂಥ’ (‘ಸಿದ್ಮಾಯಾ ಕ್ನಿಗಾ’)

೪೦. ಕ. ೫೪ – [೫೬]. ಕಾವ್ಯಕಲೆಯ ಬಗ್ಗೆ ‘ತಾಯಿನಿ ರಮೆಸ್ಲ’ (‘ವೃತ್ತಿಯ ರಹಸ್ಯಗಳು’) ಎಂಬ ಹೆಸರಿನಿಂದ ರಚಿಸಿದ ಅನೇಕ ಕವಿತೆಗಳಲ್ಲಿ ಇವು ಮೂರು.

೪೧. ಕ. ೩೭–೩೮. ೧೯೪೦ರಲ್ಲಿ ಬರೆದ ಒಂದು ಕವಿತಾಗುಚ್ಛದ ಹೆಸರು 'ನಲವತ್ತನೆಯ ಇಸವಿ'. ಅದರಿಂದ ಎರಡನ್ನು ಇಲ್ಲಿ ಕೊಟ್ಟಿದೆ.
ಕ. ೩೭. ಎರಡನೆ ಮಹಾಯುದ್ಧದಲ್ಲಿ ಹಿಟ್ಲರ್‌ನ ದಾಳಿಗೆ ಸಿಕ್ಕಿ ಪ್ಯಾರಿಸ್ ನಗರ ನಿರ್ನಾಮವಾಗುವುದರಲ್ಲಿದ್ದಾಗ ಬರೆದದ್ದು.

೪೨. ಕ. ೩೮. ಹಾಡುಹಕ್ಕಿ, ನೀರಬುಗ್ಗೆ, ಇವೆಲ್ಲವೂ ಭಾವಗೀತೆಗಳ ಪ್ರತಿಮೆಗಳು. ೧೯೪೦ರಲ್ಲಿ ಮಹಾಯುದ್ಧದ ಬಿಸಿ ತುತ್ತತುದಿ ಮುಟ್ಟಿದಾಗ ಇವುಗಳಿಂದ ಬೀಳ್ಕೊಳ್ಳುವುದೆಂದರೆ ಇನ್ನು ಮುಂದೆ ಭಾವಗೀತೆ ರಚಿಸುವುದಿಲ್ಲವೆಂಬ ಅರ್ಥವಿರಬೇಕು. ಆದರೆ ಹೇಳಿ ಕೇಳಿ ಆನಾ ಭಾವಗೀತೆಗಳ ಕವಿ. ಜೀವನದ ಕೊನೆಯವರೆಗೂ ಅದರಿಂದ ಅವಳಿಗೆ ತಪ್ಪಿಸಿಕೊಳ್ಳಲಾಗಲಿಲ್ಲ. ಅದು ಅವಳಿಗೂ ತಿಳಿದಿತ್ತು. ತನ್ನ ಆ ದೌರ್ಬಲ್ಯವನ್ನು ಕುರಿತೇ ಇದಕ್ಕೆ ಪೂರಕವೆನ್ನುವಂತೆ ಮುಂದೆ ಇನ್ನೊಂದು ಕವಿತೆ ಬರೆದಳು (ಕ. ೯೪).

೪೩. ಕ. [೩೯]. 'ಯೌವನ' – ಕವಿತಾಚಕ್ರದಿಂದ. ಪ್ರಾಯಶಃ ಬರೆಯಲು ಉದ್ದೇಶಿಸಿ ಮೊದಲೊಂದು ಕವಿತೆಯನ್ನು ಮಾತ್ರ ಬರೆದುಬಿಟ್ಟ ಕವಿತಾಚಕ್ರ. ಇಂತಹ ನಿದರ್ಶನಗಳು ಇನ್ನೂ ಹಲವು. ೧೯೧೦ರಲ್ಲಿ ಆನಾಳ ಮದುವೆಯ ಕಾಲದಲ್ಲಿ ಜಪಾನ್‌ನೊಂದಿಗೆ ನಡೆದ ಯುದ್ಧದಿಂದ ರಷ್ಯ ಇನ್ನೂ ಚೇತರಿಸಿ ಕೊಳ್ಳುತ್ತಿತ್ತು. ಹಾಗೆಯೇ ೧೯೦೫ರ ಕಿರುಕ್ರಾಂತಿಯಿಂದ ಸಹ. ಕವಿತೆಯಲ್ಲಿ ಅಂದಿನ ಪೀಟರ್ಸ್‌ಬರ್ಗ್ ಪಟ್ಟಣದ ಸಾಮಾಜಿಕ ಚಿತ್ರಣವಿದೆ.
'ತ್ಸೂಷಿಮಾ' – ರಷ್ಯ ಜಪಾನಿಗೆ ಶರಣಾಗತವಾದ ಸ್ಥಳ.
'ಪಾವಲೋವ್‌ಸ್ಕಿ', 'ಬಾಬಲೋವ್‌ಸ್ಕಿ' – ಪೀಟರ್ಸ್‌ಬರ್ಗ್‌ನ ಐತಿಹಾಸಿಕ ಸ್ಥಾನಗಳು. ಹತ್ಯೆಗೆ ಒಳಗಾದ ಗಂಡ ಮಗನ ಸೆರೆವಾಸಕ್ಕೂ ಪೀಟರ್ಸ್‌ಬರ್ಗ್‌ನ ಅವನತ ಸ್ಥಿತಿಗೂ ಆನಾಳೇ ಕಾರಣಳೆಂಬಂತೆ ಸಮಜಾಯಿಷಿ ಕೇಳುವ ದಾರುಣ ಸನ್ನಿವೇಶದ ಕಲ್ಪನೆ ಇಲ್ಲಿದೆ.

೪೪. ಕ. [೬೦]. ಮಿಹಾಯಿಲ್ ಬುಲ್ಗಕೋವ್ (೧೮೯೧ – ೧೯೪೦). ಪ್ರಖ್ಯಾತ ಕಾದಂಬರಿಕಾರ. ಅವನ 'ದಿ ಮಾಸ್ಟರ್ ಅಂಡ್ ಮಾರ್ಗರಿಟಾ' ಅವನು ಸತ್ತ ಇಪ್ಪತ್ತೇಳು ವರ್ಷಗಳ ನಂತರ ಪ್ರಕಟವಾಯಿತು. ಮೇಲೆ ಟಿಪ್ಪಣಿ ೩೯ನ್ನೂ ನೋಡಿ.

೪೫. ಕ. [೬೧]. ಎರಡನೆ ಯುದ್ಧದ ಕಾಲದಲ್ಲಿ ಬರೆದದ್ದು. ಇಲ್ಲಿನ 'ಕುತಂತ್ರಿ', 'ಹುಚ್ಚ' ಹಿಟ್ಲರ್‌ನಿಗೆ ಅನ್ವಯ.

೪೬. ಕ. ೬೩. ಆನಾ ತನ್ನ ಮೂರನೆಯ ಗಂಡ ಪ್ಯೂನಿನ್‌ನ ಮೂವರು ಪುಟ್ಟ ಮಕ್ಕಳಿಗೆ ತುಂಬ ಹಚ್ಚಿಕೊಂಡಿದ್ದಳು. ಲೆನಿನ್‌ಗ್ರಾಡ್‌ನ ಮುತ್ತಿಗೆಯ ಕಾಲದಲ್ಲಿ (ಮುಂದಿನ ಟಿಪ್ಪಣಿ ನೋಡಿ) ಅವಳು ತಾಷ್ಕೆಂಟ್‌ನಲ್ಲಿದ್ದಾಗ ಆ ಮಕ್ಕಳಲ್ಲಿ ಕಿರಿಯವನಾದ 'ವಾಲ್ಯ' ಬಾಂಬಿಗೆ ಬಲಿಯಾಗಿ ಸತ್ತ ಸುದ್ದಿ ತಿಳಿದಾಗ ಬರೆದದ್ದು.

೪೭. ಕ. ೬೪ ಮತ್ತು ೬೫. ಮೊದಲ ಕವಿತೆ ಲೆನಿನ್‌ಗ್ರಾಡ್‌ನ ಒಂಬೈನೂರು ದಿನಗಳ ಮುತ್ತಿಗೆಯಲ್ಲಿ ಅದನ್ನು ಉಳಿಸಲು ಹೋರಾಡಿದವರನ್ನೂ ಆ ಹೋರಾಟದಲ್ಲಿ ಸತ್ತವರನ್ನೂ ನೆನೆದು ಬರೆದದ್ದು. ಎರಡನೆಯದು ಆ ದುರಂತಕ್ಕೆ ಸಲ್ಲಿಸಿದ ಶೋಕಗೀತೆ.

೪೮. ಕ. ೬೬ ಮತ್ತು ೬೭. 'ಉತ್ತರದ ವಿಲಾಪಗಳು' – ಆನಾ ತನ್ನ ಹರೆಯದ ವೈಭವಪೂರ್ಣ ಪೀಟರ್ಸ್‌ಬರ್ಗ್‌ನ ಸ್ಮರಣೆಗೆ ಬರೆದ ಆರು ಭಾಗಗಳ 'ಎಲಿಜಿ'ಗಳಲ್ಲಿ ಇವು ಕೊನೆಯೆರಡು.
"ಬೇರೆ ಯಾವಳೋ ಹೆಂಗಸು ... ನನ್ನ ಹಕ್ಕಿನ ಹೆಸರನ್ನು ತಾನು ಗಿಟ್ಟಿಸಿಕೊಂಡು ಅರ್ಧಹೆಸರನ್ನಷ್ಟೇ ನನಗೆ ಬಿಟ್ಟಿದ್ದಾಳೆ..." – ಆನಾ ಚಿಕ್ಕಂದಿನಲ್ಲಿ ತನ್ನ 'ಗೊರೆಂಕೊ' ಕುಲನಾಮವನ್ನು ತೊರೆದು 'ಆಹ್ಮತೋವಾ' ಎಂಬ ಕಲ್ಪಿತ ಹೆಸರನ್ನಿಟ್ಟುಕೊಂಡು ಜೀವಮಾನದುದ್ದಕ್ಕೂ ಅದೇ ಹೆಸರಿನಿಂದ ಬಾಳಿದಳು, ಬರೆದಳು. ಇಲ್ಲಿ ಮೊದಲನೆ ವಿಲಾಪದಲ್ಲಿ, 'ಗೊರೆಂಕೊ' ಹೆಸರಿನಲ್ಲಿ ಎಲ್ಲರಂತೆ ಒಬ್ಬಳಾಗಿ ಬಾಳಬಹುದಾಗಿದ್ದ ಬದುಕಿಗೂ 'ಆಹ್ಮತೋವಾ' ಆಗಿ, ಅಂದರೆ ಕವಿಯಾಗಿ, ಬದುಕಬೇಕಾಗಿ ಬಂದ ಬದುಕಿಗೂ ಉಂಟಾದ ಅಂತರವನ್ನು ಕಲ್ಪಿಸಿಕೊಳ್ಳುತ್ತಾಳೆ (ಇದೇ ಮುಂದೆ ಕ. ೯೦ ರಲ್ಲೂ ಪ್ರಕಟವಾಗಿದೆ). ಅವಳು ಬದುಕಿನಲ್ಲಿ ಅನುಭವಿಸಬೇಕಾಗಿ ಬಂದ ಕಷ್ಟನಿಷ್ಠುರಗಳಿಗೆಲ್ಲ 'ಕವಿ ಆಹ್ಮತೋವಾ' ಆದದ್ದೇ ಕಾರಣ. ಗುಮಿಲ್ಯೊವ್ ಅವಳನ್ನು ಮದುವೆಯಾದದ್ದು ಅವಳು ಕವಿಯೆಂಬ ಕಾರಣದಿಂದಾಗಿ. ಲೆವ್‌ನ ಬಂಧನ, ಸೆರೆಮನೆವಾಸಗಳಿಗೆ ಅವನು ಗುಮಿಲ್ಯೊವ್ ದಂಪತಿಗಳ ಮಗನೆಂಬ ಕಾರಣ. ಸರಕಾರ ಅವಳನ್ನು ಪೀಡಿಸಿದ್ದೂ ಅದಕ್ಕೇ. ಕೀರ್ತಿ ದೊರೆತದ್ದು ಸಹ ಅವಳು ಕವಿಯೆಂದೇ. ಅವಳು ಬರಿಯ 'ಗೊರೆಂಕೊ' ಆಗಿ ಉಳಿದಿದ್ದರೆ ಇತರರಂತೆ ಸಿಕ್ಕಿದ್ದನ್ನು ಪಡೆದು ಖುಷಿಯಾಗಿರಬಹುದಾಗಿತ್ತು. ಆದರೆ ಆನಾ 'ಅಂತಹ ಬದುಕು ಕನ್ನಡಿಯೊಳಗಿನ ಬದುಕು, ತಾನು ಬದುಕಬೇಕಾಗಿ ಬಂದದ್ದು ಅಸೂಯೆ ಪಡುವಂತಹದು' ಎಂಬ ತೀರ್ಮಾನಕ್ಕೆ ಬರುತ್ತಾಳೆ.
ಪುಷ್ಕಿನ್, ಅಲೆಕ್ಸಾಂಡರ್ (೧೭೯೯ – ೧೮೩೭) – ರಷ್ಯದ ರಾಷ್ಟ್ರಕವಿ.
"ನನಗೆ ಗೊತ್ತಿದ್ದುದೆಂದರೆ ಅದೊಂದೇ ನಗರ" – ಪೀಟರ್ಸ್‌ಬರ್ಗ್.

೪೯. ಕ. ೭೯ (ಹಾಗೂ ೪೯–೯೨). ಬ್ರಿಟಿಷ್ ಸಾಹಿತಿ ಇಸೈಯಾ ಬರ್ಲಿನ್ ೧೯೪೫ ಮತ್ತು ೫೬ ರಲ್ಲಿ ಆನಾಳನ್ನು ಕಂಡುಹೋದ ಕಾಲದಲ್ಲಿ, ಹೊಸ ಹುರುಪು ಬಂದು ಬರೆದ ಕವಿತೆಗಳಿವು. ಹಿಂದೆ ೧೯೪೦ ರ ಯುದ್ಧಕಾಲದಲ್ಲಿ ಇನ್ನು ಮುಂದೆ ಪ್ರೇಮವಿಷಯಕ ಭಾವಗೀತೆಗಳನ್ನು ಬರೆಯುವುದಿಲ್ಲವೆಂದು ಸಂಕೇತ ನೀಡಿದ್ದವಳೇ ಈಗ ಮತ್ತೆ ಅರವತ್ತರ ವೃದ್ಧಾಪ್ಯದಲ್ಲಿ 'ನಡುರಾತ್ರಿಯ ಕವಿತೆಗಳು' 'ಅರಳಿದ ಕಾಡುಗುಲಾಬಿ' ಗಳಂತಹ ಹೊಸಬಗೆಯ ಪ್ರೇಮ ವಿಷಯಕ, ಸುಂದರ ಆದರೂ ದಾರುಣ ಭಾವಗೀತೆಗಳ ಗುಚ್ಛಗಳನ್ನು ರಚಿಸಿದಳು. ಈ ಕವಿತೆಗಳು ಆ ಗುಂಪಿನವು. ಇಲ್ಲಿನ ಮೊದಲನೆಯದರಲ್ಲಿ ಸೂರ್ಯ ಜಗತ್ತಿನ ನೀರನ್ನು ಹೀರಿ ಮುಂಜಾವಿನಲ್ಲಿ ಮಂಜಾಗಿ ಸುರಿಸುವಂತೆ ಕವಿ ಜನರ ಅನುಕಂಪವನ್ನೂ ಕವಿತೆಯನ್ನಾಗಿ ಮಾರ್ಪಡಿಸುವ ಅದ್ಭುತ ಕಲ್ಪನೆಯಿದೆ.

೫೦. ಕ. [೭೦]. ೧೯೪೬ ರ 'ಷ್ದಾನೋವ್ ಯುಗ'ದಲ್ಲಿ ಸರಕಾರ ಆನಾಳ ಕೃತಿಗಳಿಗೆ ಬಹಿಷ್ಕಾರ ಹಾಕಿದಾಗ ಹತಾಶೆಯ ಕ್ಷಣದಲ್ಲಿ ಬರೆದದ್ದು.

೫೧. ಕ. ೭೧. ಮೂರನೆಯ ಗಂಡ ಪ್ಯೂನಿನ್ ಶ್ರಮಶಿಬಿರದಲ್ಲಿ ಹತ್ಯೆಗೆ ಬಲಿಯಾದ ಸುದ್ದಿ ಬಂದಾಗ ಬರೆದದ್ದು.

೫೨. ಕ. [೭೩]. ಶೋತಾ ರೂಸ್ತಾವೆಲಿ – ಜಾರ್ಜಿಯಾ ಪ್ರಾಂತ್ಯದ ಆ ಭಾಷೆಯ ರಾಷ್ಟ್ರಕವಿ. ಕಾಲ ಹನ್ನೆರಡನೆ ಶತಮಾನ. ಅವಳ 'ಹುಲಿಯಚರ್ಮ ಹೊದ್ದ ರಾಜಕುಮಾರ' ಮಹಾಕಾವ್ಯವೆಂದು ಹೆಸರಾಗಿದೆ.

೫೩. ಕ. [೭೭]. ಈ ಕವಿತೆ ೧೯೬೦ ರಲ್ಲಿ ಬರೆದದ್ದೆಂದು ಅಂಕಿತವಾಗಿದ್ದರೂ ಹಿಂದಿನ ಭೀತಿಯುಗದಲ್ಲಿಯೊ ಅಥವಾ ಅಂದಿನ ಪರಿಸ್ಥಿತಿಯನ್ನು ನೆನಸಿಕೊಂಡೂ ಬರೆದದ್ದಿರಬೇಕು. ಏಕೆಂದರೆ ಇದನ್ನು ಬರೆಯುವ ವೇಳೆಗೆ ಅವಳಿಗೆ ಶನಿಕಾಟ ಮುಗಿದಿತ್ತು.

೫೪. ಕ. [೭೮]. ಕೂಜ್ಮಿನ್, ಮಿಹಾಯಿಲ್ (೧೮೭೫ – ೧೯೩೬) – ರಷ್ಯದ ಕಾವ್ಯ ಸಿಬಂಲಿಸಂನಿಂದ ಅಕ್ಮೆಯಿಸಂಗೆ ಮುನ್ನಡೆಯಲು ಪ್ರಭಾವ ಬೀರಿದ ಹೆಸರಾಂತ ಕವಿ.

೫೫. ಕ. [೭೯]. 'ಉರಿನೀರ ನದಿ' – ಮೂಲದಲ್ಲಿ ಹೇಡ್ಸ್ ಅಥವಾ ಪಿತೃಲೋಕದ ನದಿ. ಅದರಲ್ಲಿ ನೀರಿನ ಬದಲು ಕರಗಿದ ಬೆಂಕಿ ಹರಿಯುತ್ತಿರುತ್ತದೆಂದು ಪೌರಾಣಿಕ ನಂಬಿಕೆ.

೫೬. ಕ. ೮೧. 'ದರ್ಯಾಲ್' – ದಕ್ಷಿಣಪೂರ್ವ ರಷ್ಯದಲ್ಲಿ ಕ್ಯಾಸ್ಪಿಯನ್ ಮತ್ತು ಕಪ್ಪುಸಮುದ್ರಗಳ ನಡುವೆ ಇರುವ ಕಾಕಸಸ್ ಪರ್ವತಗಳಲ್ಲಿನ ಕಮರಿ. ಜಾರ್ಜಿಯಾದ ಒಂದು ದಂತಕತೆಯಂತೆ ಅಲ್ಲಿ ವಾಸಿಸುವ ದರ್ಯಾ ಎಂಬ ರಾಣಿಯ ಭೂತ ಪ್ರವಾಸಿಗಳನ್ನು ತನ್ನತ್ತ ಆಕರ್ಷಿಸಿ, ಅವರನ್ನು ಕೊಂದು ದೇಹವನ್ನು ಕೆಳಗಿನ ತೆರೆಕ್ ನದಿಗೆ ಎಸೆಯುತ್ತದಂತೆ. ಎಂತಲೇ 'ಕರಾಳ', 'ಶಾಪಗ್ರಸ್ತ' ಎಂಬ ವಿಶೇಷಣಗಳು. ಪಾಸ್ತರ್‌ನಾಕ್ ಆ ಆಕರ್ಷಣೆಗೆ ಸಿಕ್ಕಿದವನಂತೆ ಜಾರ್ಜಿಯಾದ ತಿಬಿಲೀಸಿಗೆ ಆಗಾಗ್ಗೆ ಹೋಗುತ್ತಿದ್ದ, ಅಲ್ಲಿನ ತನ್ನ ಇಬ್ಬರು ಕವಿಮಿತ್ರರು ಪಾವೊಲೊ ಯಾಷಿವಿಲಿ ಮತ್ತು ತಿತ್ಸಿಯನ್ ತಾಬಿಡ್ಜೆ ಅವರನ್ನು ನೋಡಿಬರಲು. ಮುಂದೆ ೧೯೩೭ರಲ್ಲಿ ಅವರಿಬ್ಬರೂ ಸ್ತಾಲಿನ್‌ನ ಹತ್ಯೆಗೆ ಬಲಿಯಾದರು.

'ಲಾವೊಕೂನ್' – ಗ್ರೀಸಿನ ಅಪೊಲೊ ದೇವತೆಯ ಪೂಜಾರಿ. ಕ್ರಿ. ಪೂ. ಒಂದನೆ ಶತಮಾನದ ಒಂದು ಶಿಲ್ಪದಲ್ಲಿ ಅವನು ತನ್ನ ಇಬ್ಬರು ಮಕ್ಕಳ ಸಮೇತ ಎರಡು ದೈತ್ಯಸರ್ಪಗಳೊಂದಿಗೆ ಹೋರಾಡುತ್ತಿರುವುದನ್ನು ತೋರಿಸಲಾಗಿದೆ. ಪಾಸ್ತರ್‌ನಾಕ್ ತನ್ನ 'ಪಿತೃಗಳಿಗೆ' ('ಓತ್ಸಿ') ಕವಿತೆಯಲ್ಲಿ ಭೂಮಿಯ ಹೊಗೆ ಆಕಾಶದ ಮಂಜಿನೊಂದಿಗೆ ಹೋರಾಡುವಂತೆ ಕಲ್ಪಿಸಿದ್ದಾನೆ.

೫೭. ಕ. ೮೪. ಆನಾ ಆಸ್ಪತ್ರೆಯಲ್ಲಿ ಸನ್ನಿಯ ಸ್ಥಿತಿಯಲ್ಲಿದ್ದಾಗ ಇದನ್ನು ರಚಿಸಿದ್ದು. ಇದಕ್ಕೆ 'ನಾವು ನಾಲ್ವರು' ಎಂಬ ಶೀರ್ಷಿಕೆಯೂ ಇದೆ. ಇಲ್ಲಿ ಗುರುತಿಸಿರುವ ಎರಡು ಧ್ವನಿಗಳು ಮ್ಯಾಂದಲ್‌ಷ್ತಾಮ್ ಮತ್ತು ಪಾಸ್ತರ್‌ನಾಕ್‌ರದು. 'ಎಲ್ಡರ್ ಬೆರಿಯ ಕೊಂಬೆ' ಮರೀನಾ ತ್ಸ್ವೆತಯೇವಾ. ಕೊನೆಯವಳು, ಉಳಿದ ಮೂವರಿಗಿಂತ ಹಿರಿಯಳು, ಅವರೆಲ್ಲರ ನಂತರವೂ ಬದುಕಿರುವವಳು, ಸ್ವತಃ ಆಹ್ಮತೋವಾ. ಕವಿತೆಯ ತಲೆಕಟ್ಟಿನ ಸಾಲು ತ್ಸ್ವೆತಯೇವಾ ಆಹ್ಮತೋವಾಳನ್ನು ಕುರಿತು ಬರೆದ ಕವಿತೆಯಿಂದ ಉದ್ಧರಣೆ, ಬಹು ಉಚಿತ ವರ್ಣನೆ.

೫೮. ಕ. ೮೬. ತಲೆಕಟ್ಟಿನ ಉದ್ಧರಣೆ ೧೯೨೨ರಲ್ಲಿ ಆನಾಳೇ ಬರೆದ ಕವಿತೆಯ ಸಾಲುಗಳು (ಕ. ೪೫).

೫೯. ಕ. ೮೭. ಮೊರಸೋವಾ – ಹದಿನೇಳನೆ ಶತಮಾನದಲ್ಲಿ ತ್ಸಾರ್‌ನ ಸಮ್ಮತಿಯೊಂದಿಗೆ ರಷ್ಯದ ಚರ್ಚಿನ ಮಹಾಮಹಂತ ಧಾರ್ಮಿಕವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತರಹೊರಟಾಗ ಅದರ ವಿರುದ್ಧ ಹೋರಾಡಿ ಕಗ್ಗವಿಯ ಶಿಕ್ಷೆ ಪಡೆದು ಅಲ್ಲಿ ಅನ್ನನೀರಿಲ್ಲದೆ ಜೀವ ನೀಗಿದ ಒಬ್ಬ ಮಹಿಳೆ, ಧರ್ಮ ಪರಿಪಾಲನೆಗಾಗಿ ತನ್ನ ಐಶ್ವರ್ಯವನ್ನೆಲ್ಲ ತೊರೆದು ಸನ್ಯಾಸಿನಿಯಾಗಿದ್ದವಳು.

'ಹೆರಾದ' – ಏಸುಕ್ರಿಸ್ತನ ಕಾಲದಲ್ಲಿ ಆಳಿದ ಯೆಹೂದೀ ದೊರೆ. ಅವನ ಮಲಮಗಳು ಸಲೋಮೆ ಸುಂದರಿ, ನೃತ್ಯಾಂಗನೆ. ಹೆರಾದನ ಮುಂದೆ ಕುಣಿದು

ಅವನನ್ನು ಮೆಚ್ಚಿಸಿ ಅದಕ್ಕೆ ಬಹುಮಾನವಾಗಿ ಆಗ ಹೆರಾದನ ಬಂಧನದಲ್ಲಿದ್ದ ಜಾನ್ ದಿ ಬ್ಯಾಪ್ಟಿಸ್ಟ್‌ನ ತಲೆಯನ್ನು ಕೇಳಿ ಪಡೆಯುತ್ತಾಳೆ. ಇಂಗ್ಲಿಷ್ ಕವಿ ಆಸ್ಕರ್‌ವೈಲ್ಡ್ ಈ ವಿಷಯದ ಮೇಲೆ ಒಂದು ಉತ್ತಮ ನಾಟಕ ಬರೆದಿದ್ದಾನೆ.

ದೀದೊ – ಪತಿನಿಷ್ಠೆಗೆ ಹೆಸರಾದ ಒಬ್ಬ ಪ್ರಾಚೀನ ರಾಣಿ. ದೀದೊಳ ಪತಿಯ ಸಂಪತ್ತಿನ ಆಸೆಗೆ ಸ್ವತಃ ಅವಳ ಸೋದರನೇ ಅವನನ್ನು ಕೊಂದಾಗ, ದೀದೊ ಆ ಸಂಪತ್ತಿನೊಂದಿಗೆ ದೇಶಬಿಟ್ಟು ಕಾರ್ಥೇಜಿಗೆ ಬಂದು ಅಲ್ಲಿ ಕ್ರಿ. ಪೂ. ೮೫೩ ರಲ್ಲಿ ರಾಜ್ಯ ಸ್ಥಾಪಿಸುತ್ತಾಳೆ. ಮುಂದೆ ನೆರೆರಾಜ್ಯದ ಹೆಚ್ಚು ಬಲಶಾಲಿ ದೊರೆ ತನ್ನನ್ನು ಮದುವೆಯಾಗದಿದ್ದರೆ ರಾಜ್ಯನಾಶ ಮಾಡುವುದಾಗಿ ಹೆದರಿಸಿದಾಗ ಅವಳ ಪ್ರಜೆಗಳೇ ಅದಕ್ಕೆ ಒತ್ತಾಯ ಮಾಡುತ್ತಾರೆ. ಆಗ ಸತ್ತಗಂಡನ ನೆನಪಿಗೆ ಚಿತೆ ಸೃಷ್ಟಿಸಿ ಅದರಲ್ಲಿ ಬಿದ್ದು ಸಾಯುತ್ತಾಳೆ.

ಜೋನ್ (ಆಫ್ ಆರ್ಕ್) (೧೪೧೨–೩೧) – ಫ್ರಾನ್ಸಿನ ವೀರಕನ್ಯೆ. ಓದಿ ಬರೆಯಲು ಬಾರದ ಹಳ್ಳಿಯ ಹುಡುಗಿ, ದೈವಭಕ್ತೆ. ಇಂಗ್ಲಂಡ್ – ಫ್ರಾನ್ಸ್‌ಗಳ ನಡುವೆ ನಡೆದ 'ನೂರು ವರ್ಷಗಳ ಯುದ್ಧ'ದಲ್ಲಿ ದೈವವಾಣಿಯಂತೆ ಸೇನೆಯ ನಾಯಕತ್ವ ವಹಿಸಿಕೊಂಡು ಫ್ರಾನ್ಸಿಗೆ ಆಂಶಿಕ ಜಯಗಳಿಸಿ ಕೊಡುತ್ತಾಳೆ. ಮುಂದೆ ದೈವಪ್ರೇರಣೆ ನಿಂತು ಕಾದುವ ಇಚ್ಛೆಯಿಲ್ಲದಾಗಲೂ ದೊರೆಯ ಒತ್ತಾಯಕ್ಕೆ ಕಾದಾಟ ಮುಂದುವರಿಸಿ ಸೋತು, ಇಂಗ್ಲಿಷರಿಗೆ ಸೆರೆಸಿಗುತ್ತಾಳೆ. ಅವರು ಜೋನಳನ್ನು ಮಾಟಗಾತಿ, ಪಾಷಂಡಿಯೆಂದು ಕಂಬಕ್ಕೆ ಕಟ್ಟಿ ಸುಡುತ್ತಾರೆ. ಅವಳ ಬಗ್ಗೆ ರಚಿತವಾಗಿರುವ ಸಾಹಿತ್ಯ ವಿಪುಲ. ಬರ್ನಾರ್ಡ್ ಷಾ, ಅನೂಯಿ, ಬ್ರೆಷ್ಟ್ ಮುಂತಾಗಿ ಹಲವರು ನಾಟಕ ರಚಿಸಿದ್ದಾರೆ.

೬೦. ಕ. ೮೯–೯೨. ಮೇಲೆ ಟಿಪ್ಪಣಿ ೪೯ನ್ನು ನೋಡಿ.

೬೧. ಕ. [೯೩] – ೯೯ ಆನಾ ಆಗಾಗ ಸಣ್ಣಸಣ್ಣ ಚತುಷ್ಪದಿಗಳನ್ನು ರಚಿಸುತ್ತಿದ್ದಳು. ಅವುಗಳಲ್ಲಿ ಹಲವು ಅವಳೇ ಅಷ್ಟು ಮುಖ್ಯವಲ್ಲವೆಂದುಕೊಂಡ ಕಾರಣ ದಿಂದಲೊ ಏನೊ ಸಂಗ್ರಹಗಳಲ್ಲಿ ಅಚ್ಚಾಗಿರಲಿಲ್ಲ. ಈಚಿನ ಸಮಗ್ರದಿಂದ ಅವುಗಳಲ್ಲಿ ಏಳನ್ನು ಆರಿಸಿ ಇಲ್ಲಿ ಕೊಟ್ಟಿದೆ.

೬೨. ಕ. ೧೦೦. ಇದು ಸಾಯುವ ಐದುವರ್ಷ ಮೊದಲಿನ ಕವಿತೆಯಾದರೂ ಅದರ ಅಂತಿಮ ಧ್ವನಿಯಿಂದಾಗಿ ಈ ಅನುವಾದ–ಸಂಪುಟದ ಕೊನೆಯ ಪದ್ಯವನ್ನಾಗಿ ತೆಗೆದುಕೊಂಡಿದೆ.

## ೩. ಆಹ್ಮತೋವಾಳ ಜೀವನ ಮತ್ತು ರಷ್ಯ : ಘಟನಾವಳಿ

| | | |
|---|---|---|
| ೧೧ ಜೂನ್ ೧೮೮೯ | – | ರಷ್ಯದ ತೀರಾ ದಕ್ಷಿಣಕ್ಕಿರುವ ಕಪ್ಪುಸಮುದ್ರದ ದಂಡೆಯ ಮೇಲಿನ ಒದೆಸ್ಸಾದ ಬಳಿ ಗೊರೆಂಕೊ ಕುಟುಂಬದಲ್ಲಿ ಆನಾಳ ಜನನ. |
| ೧೮೯೦ | – | ಗೊರೆಂಕೊ ಕುಟುಂಬ ಒದೆಸ್ಸಾದಿಂದ ಉತ್ತರದ ಪೀಟರ್ಸ್‌ಬರ್ಗ್ ಬಳಿಯ ತ್ಸಾರ್‌ಸ್ಕೋಯೆ ಸೆಲೋಗೆ ಬಂದು ನೆಲಸುತ್ತದೆ.<br>ಕವಿ ಬೋರಿಸ್ ಪಾಸ್ತರ್‌ನಾಕ್‌ನ ಜನನ. |
| ೧೮೯೧ | – | ಕವಿ ಆಸಿಪ್ ಮ್ಯಾಂದಲ್‌ಷ್ತಾಮ್‌ನ ಜನನ. |
| ೧೮೯೨ | – | ಕವಿಯಿತ್ರಿ ಮರೀನಾ ತ್ಸ್ವೆತಯೇವಾಳ ಜನನ. |
| ೧೯೦೦ | – | ತ್ಸಾರ್‌ಸ್ಕೋಯೆ ಸೆಲೋದ ಗ್ರಾಮರ್‌ಸ್ಕೂಲಿನಲ್ಲಿ ಓದುತ್ತಿರುವಾಗ ಇನ್ನೂ ಹನ್ನೊಂದು ವರ್ಷದ ವಯಸ್ಸಿನಲ್ಲಿಯೇ ಆನಾ ಕವಿತೆ ಬರೆಯಲು ಷುರುಮಾಡುತ್ತಾಳೆ. |
| ೧೯೦೩ | – | ಹದಿನಾಲ್ಕನೆ ವಯಸ್ಸಿನಲ್ಲಿ ಯುವಕವಿ ನಿಕೊಲಯ್ ಗುಮಿಲ್ಯೊವ್‌ನೊಂದಿಗೆ ಪರಿಚಯ. |
| ೧೯೦೪–೦೫ | – | ರಷ್ಯ–ಜಪಾನ್ ಯುದ್ಧ. ರಷ್ಯದ ಸೋಲು. |
| ೧೯೦೫ | – | ೧೯೧೭ ರ ಮಹಾಕ್ರಾಂತಿಗೆ ಪೂರ್ವರಂಗವಾಗಿ ತ್ಸಾರ್‌ನ ವಿರುದ್ಧ ಅಸಫಲ ಕ್ರಾಂತಿ.<br>ಆನಾಳ ತಂದೆತಾಯಿಯರ ಮದುವೆಯ ಮುರಿಗಡೆ. ತಾಯಿ ಮಕ್ಕಳೊಂದಿಗೆ ದಕ್ಷಿಣ ರಷ್ಯದ ಯೆವ್ಪತೋರಿಯಾ, ನಂತರ ಕೀವ್‌ಗೆ ಬಂದು ನೆಲಸುತ್ತಾಳೆ. |
| ೧೯೦೭ | – | ಆನಾ ತನ್ನ 'ಗೊರೆಂಕೊ' ಕುಲನಾಮವನ್ನು ತೊರೆದು 'ಆಹ್ಮತೋವಾ' ಎಂದು ಹೆಸರು ಬದಲಾಯಿಸಿಕೊಳ್ಳುತ್ತಾಳೆ. |

೧೯೦೬–೦೭ – ಕೀವ್‌ನಲ್ಲಿ ಗ್ರಾಮರ್ ಶಾಲೆ ಮುಗಿಸಿ, ಎರಡು ವರ್ಷ ಲ್ಯಾಟಿನ್ ಮತ್ತು ಕಾನೂನಿನ ಅಧ್ಯಯನ.

೧೯೦೭ – ಪ್ಯಾರಿಸ್‌ನಿಂದ ಪ್ರಕಟವಾಗುತ್ತಿದ್ದ ರಷ್ಯಭಾಷೆಯ ಪತ್ರಿಕೆ 'ಸಿರಿಯೂಸ್'ನಲ್ಲಿ ಮೊದಲ ಕವಿತೆಯ ಪ್ರಕಟನೆ.

೧೯೦೯ – ಗುಮಿಲ್ಯೊವ್‌ನೊಂದಿಗೆ ಮದುವೆಗೆ ಒಪ್ಪಿಗೆ.

ಜೂನ್ ೧೯೧೦ – ಗುಮಿಲ್ಯೊವ್‌ನೊಂದಿಗೆ ಮದುವೆ. ಪೀಟರ್ಸ್‌ಬರ್ಗ್‌ಗೆ ಬಂದು ನೆಲಸಿ, ಸಂಸಾರ ಹೂಡಿ, ಜತೆಗೇ ಇತಿಹಾಸ, ಸಾಹಿತ್ಯಗಳಲ್ಲಿ ಅಧ್ಯಯನ ಮುಂದುವರಿಸುತ್ತಾಳೆ. ನಡುವೆ ಅವನೊಂದಿಗೆ ಮೊದಲ ಬಾರಿ ಪ್ಯಾರಿಸ್ ಪ್ರವಾಸ.
ಗುಮಿಲ್ಯೊವ್‌ನಿಂದ 'ಕವಿಕೂಟ'ದ ಸ್ಥಾಪನೆ. ಸಾಹಿತ್ಯಿಕ ಚಳವಳಿ ಆಕ್ಮೆಯಿಸಂನ ಜನನ.
ಆನಾಳಿಗೆ ಇನ್ನೊಕೆಂಟಿ ಅನೆನ್‌ಸ್ಕಿಯ 'ಸೈಪ್ರಸ್ ಕರಂಡ' ('ಕಿಪಾರಿಸೋವಿ ಲಾರೆತ್ಸ್') ಓದಲು ಸಿಕ್ಕು, ಅದರಿಂದ ಕಾವ್ಯರಚನೆಗೆ ಮಾರ್ಗದರ್ಶನ ದೊರೆಯುತ್ತದೆ.

೧೯೧೧ – ಎರಡನೆ ಬಾರಿ ಪ್ಯಾರಿಸ್ ಪ್ರವಾಸ. ಅಲ್ಲಿ ಮುಂದೆ ವಿಶ್ವವಿಖ್ಯಾತನಾದ ಮೋದಿಗ್ಲ್ಯಾನಿಯ ಪರಿಚಯ, ಗೆಳೆತನ.

೧೯೧೨ – ಮೊದಲ ಕವಿತಾಸಂಗ್ರಹ 'ಸಂಜೆ' ('ವೇಚೆರ್')ಯ ಪ್ರಕಟನೆ.
ಇಟಲಿಯ ಪ್ರವಾಸ.
ಸಿಂಬಲಿಸ್ಟ್, ಆಕ್ಮೆಯಿಸ್ಟ್, ಫ್ಯೂಚರಿಸ್ಟ್ ಕವಿಗಳ ನಡುವೆ ತಿಕ್ಕಾಟ.

೧ ಅಕ್ಟೋಬರ್ ೧೯೧೨ – ಮಗ ಲೆವ್ ಗುಮಿಲ್ಯೊವ್‌ನ ಜನನ.

೧೯೧೩ – 'ದಿ ಸ್ಟ್ರೇ ಡಾಗ್' ನಾಟ್ಯಗೃಹದ ಸಂಜೆ–ಬದುಕು.
ವ್ಸೆವೊಲೋದ್ ಕ್ನ್ಯಾಜೆವ್‌ನ ಆತ್ಮಹತ್ಯೆ.

ಮಾರ್ಚ್ ೧೯೧೪ – ಎರಡನೆ ಸಂಗ್ರಹ 'ಜಪಮಾಲೆ' ('ಚ್ಯೋತ್ಕಿ')ಯ ಪ್ರಕಟನೆ.

| | | |
|---|---|---|
| ಆಗಸ್ಟ್ ೧೯೧೪ | – | ಮೊದಲನೆ ಮಹಾಯುದ್ಧದ ಆರಂಭ.<br>'ಪೀಟರ್ಸ್‌ಬರ್ಗ್' ನ ಹೆಸರು 'ಪೆತ್ರೊಗ್ರಾದ್' ಆಗುತ್ತದೆ. |
| ೧೯೧೭ | – | ಗುಮಿಲ್ಯೊವ್‌ನೊಂದಿಗೆ ವಿರಸ ಬೆಳೆದು ಬೇರೆ ಬೇರೆ ಇರತೊಡಗುತ್ತಾರೆ. ಅಲ್ಲಿಂದಾಚೆಗೆ ಆನಾಳದು ನಿರಾಶ್ರಿತೆಯ ಬಾಳು. |
| ಮಾರ್ಚ್ ೧೯೧೭ | – | ರಷ್ಯದ ಕ್ರಾಂತಿ. ಅಕ್ಟೋಬರ್ ತಿಂಗಳಲ್ಲಿ ಲೆನಿನ್‌ನಿಂದ ರಷ್ಯದ ಅಧಿಕಾರ ಗ್ರಹಣ.<br>ಕ್ರಾಂತಿಪರರು, ಕ್ರಾಂತಿವಿರೋಧಿಗಳ ನಡುವೆ ಘರ್ಷಣೆ, ದೇಶದಲ್ಲಿ ಅಂತರ್ಯುದ್ಧ, ಬುದ್ಧಿಜೀವಿಗಳಲ್ಲಿ ಕ್ರಾಂತಿ ವಿರೋಧಿಗಳಿಂದ ದೇಶತ್ಯಾಗ. ಅವರಲ್ಲಿ ಆನಾ ಅತಿಯಾಗಿ ಪ್ರೀತಿಸಿದ್ದ ಬೋರಿಸ್ ಆನ್‌ರೆಪ್ ಸಹ ಒಬ್ಬ.<br>ಅದೇ ವರ್ಷ, ಆನಾಳ ಮೂರನೆ ಸಂಗ್ರಹ 'ಬೆಳ್ಳಕ್ಕಿ ಹಿಂಡು' ('ಬೇಲಯಾ ಸ್ತಾಯಾ') ಪ್ರಕಟನೆ. |
| ೧೯೧೮ | – | ಗುಮಿಲ್ಯೊವ್‌ನೊಂದಿಗೆ ವಿವಾಹವಿಚ್ಛೇದನೆ. ಆತುರದಲ್ಲಿ ವ್ಲಾದಿಮಿರ್ ಶಿಲೆಯ್‌ಕೊನೊಂದಿಗೆ ಎರಡನೆ ಮದುವೆ. |
| ಏಪ್ರಿಲ್ ೧೯೨೧ | – | ನಾಲ್ಕನೆ ಸಂಗ್ರಹ 'ಗುಬ್ಬಚ್ಚಿಬಾಳೆ' ('ಪದ್‌ರೋಷ್ನಿಕ್') ಪ್ರಕಟನೆ. |
| ಆಗಸ್ಟ್ ೧೯೨೧ | – | ಕ್ರಾಂತಿವಿರೋಧಿ ಚಟುವಟಿಕೆಗಳ ಮೇಲೆ ಲೆನಿನ್‌ನ ಹೊಸ ಸರಕಾರ ಗುಮಿಲ್ಯೊವ್ ಮತ್ತಿತರ ಅರವತ್ತು ಮಂದಿಯನ್ನು ಗುಂಡಿಟ್ಟು ಕೊಲ್ಲುತ್ತದೆ. ಅವನ ಸಾವಿನಿಂದಾಗಿ ಒಂದು ಚಳವಳಿಯಾಗಿ ಆಕ್ಮೆಯಿಸಂನ ಅಂತ್ಯ. |
| ನವೆಂಬರ್ ೧೯೨೧ | – | ಐದನೆ ಸಂಗ್ರಹ 'ಕ್ರಿಸ್ತೋತ್ತರ ೧೯೨೧' ('ಆನೊ ದಾಮಿನಿ ೧೯೨೧') ರ ಪ್ರಕಟನೆ.<br>ಅದೇ ವರ್ಷ, ಸಿಂಬಲಿಸ್ಟ್ ಕವಿ ಅಲೆಕ್ಸಾಂದರ್ ಬ್ಲೋಕ್‌ನ ನಿಧನ.<br>ಈ ಸುಮಾರಿಗೆ ಆನಾ ಶಿಲೆಯ್‌ಕೊನಿಂದ ದೂರವಾಗುತ್ತಾಳೆ. ಪ್ಯೂನಿನ್‌ನ ಜತೆ ಸ್ನೇಹ ಬೆಳೆಯುತ್ತದೆ. |

೧೯೨೨ – ಕವಯಿತ್ರಿ ತ್ಸ್ವೆತಯೇವಾ ದೇಶತೊರೆದು ಹೋಗುತ್ತಾಳೆ.

೧೯೨೩ – ಫ್ಯೂಚರಿಸ್ಟ್ ಕವಿ ಮಾಯಕೊವಸ್ಕಿ ಎಡಪಕ್ಷದ ಸಾಹಿತ್ಯ ಸಂಸ್ಥೆ ಸ್ಥಾಪಿಸುತ್ತಾನೆ. ಆದರೆ 'ಜನವಾದಿ' (ಪ್ರೊಲಟೇರಿಯನ್) ಕವಿಗಳದ್ದು ಮೇಲುಗೈಯಾಗುತ್ತದೆ. ಆನಾಳ ಕಾವ್ಯವಿಷಯ ಕ್ರಾಂತಿಪರವಾಗಿರುವುದರ ಬದಲು ವ್ಯಕ್ತಿನಿಷ್ಠವಾಗಿರುವುದಕ್ಕೆ ಅವರು ಅವಳ ವಿರುದ್ಧ ದೂಷಣೆ – ಖಂಡನೆಗಳ ಪ್ರಚಾರ ಪ್ರಾರಂಭಿಸುತ್ತಾರೆ.

೧೯೨೪ – ಲೆನಿನ್‌ನ ನಿಧನ. ಪಕ್ಷದ ನೇತೃತ್ವಕ್ಕಾಗಿ ಮುಖಂಡರಲ್ಲಿ ಒಳಗೊಳಗೇ ತಿಕ್ಕಾಟ.
'ಪೆತ್ರೊಗ್ರಾದ್' (ಹಿಂದಿನ ಪೀಟರ್ಸ್‌ಬರ್ಗ್) ನಗರದ ಹೆಸರು 'ಲೆನಿನ್‌ಗ್ರಾದ್'ಗೆ ಬದಲಾಗುತ್ತದೆ.

೧೯೨೫ – ಮಾಯಕೊವಸ್ಕಿಯನ್ನು ಬದಿಗೊತ್ತಿ 'ಜನವಾದಿ' ಲೇಖಕರು ಮೇಲೆ ಬರುತ್ತಾರೆ.

೧೯೨೬ – ಆನಾ ಪ್ಯೂನಿನ್‌ನ ಮನೆಯಲ್ಲಿ ಇರತೊಡಗುತ್ತಾಳೆ.

೧೯೨೭ – ಮೊದಲು ಪಕ್ಷದಿಂದ, ನಂತರ ದೇಶದಿಂದಲೇ ತ್ರಾತ್ಸ್ಕಿಯ ಉಚ್ಚಾಟನೆ.

೧೯೨೮ – ಸ್ತಾಲಿನ್ ಜತೆಮುಖಂಡರ ಮೇಲೆ ವಿಜಯ ಸ್ಥಾಪಿಸಿ ಅಧಿಕಾರಕ್ಕೆ ಬರುತ್ತಾನೆ. ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಸರಕಾರದ ಧೋರಣೆಯನ್ನು ಒಪ್ಪದವರ ದಮನಕ್ಕೆ ಆರಂಭ.

೧೯೨೯ – ಕೃಷಿಯ ಸರಕಾರೀಕರಣ, ದೇಶದಲ್ಲಿ 'ಒಕ್ಕೂಟ'(ಕಲೆಕ್ಟಿವ್) ಗಳ ಸ್ಥಾಪನೆ.

೧೯೩೦ – ಮಾಯಕೊವಸ್ಕಿಯ ಆತ್ಮಹತ್ಯೆ.

೧೯೩೨ – ಸರಕಾರದಿಂದ ಎಲ್ಲ ಸ್ವಂತದ ಸಾಹಿತ್ಯಿಕ ಚಟುವಟಿಕೆಗಳ ಬಹಿಷ್ಕಾರ. 'ರೈಟರ್ಸ್ ಯೂನಿಯನ್' ನ ಸ್ಥಾಪನೆ.

೧೯೩೪ – ಲೆನಿನ್‌ಗ್ರಾಡ್‌ನಲ್ಲಿ ಕಿರೋವ್‌ನ ಕೊಲೆ, ಸ್ವತಃ ಸ್ತಾಲಿನ್‌ನ ಒಳಸಂಚಿನಿಂದ. (ಇದರ ಸಂದರ್ಭ ಈಚೆಗೆ ಪ್ರಕಟವಾದ ಅನಾತೋಲಿ ರೂಬಕೋವ್‌ನ 'ಅರ್ಬಾತ್‌ನ ಮಕ್ಕಳು', 'ಚಿಲ್ಡ್ರನ್ ಆಫ್ ದಿ ಅರ್ಬಾತ್', ಕಾದಂಬರಿಯಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ.)
ಕವಿ ಮ್ಯಾಂದಲ್‌ಷ್ಟಾಮ್‌ನ ಬಂಧನ.

೧೯೩೫ – ಕಿರೋವ್ ಕೊಲೆಯ ಪಿತೂರಿಯಲ್ಲಿ ಭಾಗಿಗಳೆಂಬ ಆಪಾದನೆಯ ಮೇಲೆ ಮಗ ಲೆವ್‌ನ ಹಾಗೂ ಮೂರನೆಯ ಗಂಡ ಪ್ಯೂನಿನ್‌ರ ಬಂಧನ. ವರ್ಷದ ನಂತರ ಅವರ ಬಿಡುಗಡೆ.
ಅನಾಳ ವಿಖ್ಯಾತಕೃತಿ 'ರಿಕ್ವಿಯಂ'ನ ರಚನೆಯ ಆರಂಭ.

೧೯೩೬ – ಮ್ಯಾಕ್ಸಿಂ ಗಾರ್ಕಿಯ ನಿಧನ.
ಗುಪ್ತಚರ ವಿಭಾಗದ ಮೇಲಧಿಕಾರಿ ಯಗೋದಾನ ಆಡಳಿತ ಸಡಿಲವೆಂದು ಹೇಳಿ ಅವನ ಸ್ಥಾನಕ್ಕೆ ಯೆಷೋವ್‌ನ ನೇಮಕ. 'ಜಗತ್ತಿನಲ್ಲೇ ಅತ್ಯಂತ ಪ್ರಜಾಸತ್ತಾತ್ಮಕ'ವೆಂದು ಬೆನ್ನು ತಟ್ಟಿಕೊಂಡ 'ಸ್ತಾಲಿನ್ ರಾಜ್ಯಾಂಗ'ದ ಘೋಷಣೆ.

೧೯೩೬–೩೮ – ಯೆಷೋವ್‌ನ ಆಡಳಿತದಲ್ಲಿ 'ಮಹಾಭೀತಿಯ ಯುಗ' ('ದಿ ಗ್ರೇಟ್ ಟೆರರ್') ದ ಆರಂಭ. ಹತ್ತಾರು ಲಕ್ಷ ಜನರ ಬಂಧನ. ಶ್ರಮಶಿಬಿರಗಳಿಗೆ ಅವರ ಸಾಗಾಣಿಕೆ. ಅಸಂಖ್ಯ ಜನರ ನರಹತ್ಯೆ.

೧೯೩೮ – ಎರಡನೆ ಬಾರಿಗೆ ಲೆವ್‌ನ ಬಂಧನ.
ಶ್ರಮಶಿಬಿರದಲ್ಲಿ ಕವಿ ಮ್ಯಾಂದಲ್‌ಷ್ಟಾಮ್‌ನ ಸಾವು.
ಮೂರನೆಯ ಗಂಡ ಪ್ಯೂನಿನ್‌ನೊಂದಿಗೆ ಒಡಕು ಹುಟ್ಟಿ ಅನಾ ಅಂತಿಮವಾಗಿ ಸಂಬಂಧ ತೊರೆಯುತ್ತಾಳೆ.

೧೯೩೯ – ಎರಡನೆ ಮಹಾಯುದ್ಧದ ಆರಂಭ. ಮೊದಮೊದಲು ರಷ್ಯ–ಜರ್ಮನಿ ಒಪ್ಪಂದ ಮಾಡಿಕೊಂಡು ಒಟ್ಟಾಗಿ ಕಾದುತ್ತವೆ.

೧೯೩೯ – ಆನಾ ಮಗನ ಗತಿ ತಿಳಿಯಲು ಹದಿನೇಳು ತಿಂಗಳ ಕಾಲ ದಿನವೂ ಲೆನಿನ್‌ಗ್ರಾಡ್ ಸೆರೆಮನೆಯ ಮುಂದೆ ಹಾಜರಿ ಹಾಕುತ್ತಾಳೆ.
'ರಿಕ್ವಿಯಂ'ನ ರಚನೆ ಮುಂದುವರಿಯುತ್ತದೆ.

೧೯೪೦ – ಯುದ್ಧದ ಕಾರಣ ರಷ್ಯದ ಒಳಗಡೆ ದಬ್ಬಾಳಿಕೆಯ ಸಡಿಲಿಕೆ. 'ರೈಟರ್ಸ್ ಯೂನಿಯನ್' ಆನಾಗೆ ಸದಸ್ಯತ್ವ ನೀಡುತ್ತದೆ. ಹತ್ತೊಂಬತ್ತು ವರ್ಷಗಳ ಕಾಲ ಏನನ್ನೂ ಪ್ರಕಟಿಸಲು ಬಿಡದವರೇ ಈಗ ಅವಳ ಹಿಂದಿನ 'ಆರು ಸಂಗ್ರಹಗಳಿಂದ' ಆಯ್ದು ಒಂದು ಸಂಕಲನ ಹೊರತರುತ್ತಾರೆ. ಆದರೆ ರಷ್ಯ ಜರ್ಮನಿಯೊಂದಿಗೆ ಯುದ್ಧದಲ್ಲಿ ಕೈಕೈ ಕೂಡಿಸಿದ್ದ ಕಾರಣ ಅವಳ ಕವಿತೆ 'ಲಂಡನ್ನಿನವರಿಗೆ'ಯಾಗಲಿ 'ರಿಕ್ವಿಯಂ' ಆಗಲಿ ಅದರಲ್ಲಿ ಸೇರುವುದಿಲ್ಲ. ಒಂದು ಪ್ರತ್ಯೇಕ ಸಂಕಲನವಾಗಿ ಬರಬೇಕಾಗಿದ್ದ 'ಹೊಳೆಜೊಂಡು' ('ತ್ರಸ್ನಿಕ್') ಅದರಲ್ಲಿ ಸೇರಿದೆ.



ಜೂನ್ ೧೯೪೧ – ರಷ್ಯ–ಜರ್ಮನಿಗಳ ಮೈತ್ರಿ ಕೊನೆಗಂಡು ಈಗ ಜರ್ಮನಿ ರಷ್ಯದ ಮೇಲೆ ಆಕ್ರಮಣ ಮಾಡುತ್ತದೆ. ಆನಾ ಈಗ ಲೆನಿನ್‌ಗ್ರಾಡ್‌ನ ಪ್ರಮುಖ ನಾಗರಿಕೆ. ಸರಕಾರ ಅವಳನ್ನು ರಕ್ಷಿಸಲು ದಕ್ಷಿಣದ ತಾಷ್ಕೆಂಟಿಗೆ ಸಾಗಿಸುತ್ತದೆ.
ಕವಿಯಿತ್ರಿ ತ್ಸ್ವೆತಯೇವಾ ನಿರ್ಗತಿಕತೆ, ಏಕಾಕಿತನಗಳನ್ನು ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಸೆಪ್ಟೆಂಬರ್ ೧೯೪೧ – ಜರ್ಮನರು ಲೆನಿನ್‌ಗ್ರಾಡ್ ತಲಪಿ ಸುತ್ತಲಿಂದ ದಿಗ್ಬಂಧನ ಹಾಕಿ ರಷ್ಯದ ಉಳಿದ ಭಾಗಗಳೊಂದಿಗೆ ಸಂಪರ್ಕ ತಪ್ಪಿಸುತ್ತಾರೆ.

ನವೆಂಬರ್ ೧೯೪೧ – ದಕ್ಷಿಣದ ಕಡೆಯಿಂದ ನುಗ್ಗಿ ಬಂದ ಜರ್ಮನ್ ಸೇನೆಯನ್ನು ರಷ್ಯ ಮಾಸ್ಕೋದ ಅಂಚಿನಲ್ಲಿ ತಡೆದು ನಿಲ್ಲಿಸುತ್ತದೆ. ಡಿಸೆಂಬರ್‌ನಲ್ಲಿ ಚಳಿ ತಡೆಯಲಾರದೆ, ಜರ್ಮನಿ ತನ್ನ ಮಾಸ್ಕೊ ದಂಡಯಾತ್ರೆಯನ್ನು ನಿಲ್ಲಿಸುತ್ತದೆ.

ಜನವರಿ ೧೯೪೩ – ಒಂಬೈನೂರು ದಿನಗಳ ಘೋರ ಹೋರಾಟದ ನಂತರ ರಷ್ಯಕ್ಕೆ ಜರ್ಮನಿಯ ಲೆನಿನ್‌ಗ್ರಾಡ್ ದಿಗ್ಬಂಧನ ಮುರಿಯಲು

ಸಾಧ್ಯವಾಗುತ್ತದೆ. ಅಲ್ಲಿಂದಾಚೆಗೆ ಜರ್ಮನಿ ಸೋತು ಹಿಂದೆ ಸರಿಯತೊಡಗುತ್ತದೆ.

ಜೂನ್ ೧೯೪೪ – ಮೂರು ವರ್ಷಗಳ ನಂತರ ಆನಾ ತಾಷ್ಕೆಂಟಿನಿಂದ ಮಾಸ್ಕೊ ಮೂಲಕ ಹಿಂದಿರುಗುತ್ತಾಳೆ. ಅಲ್ಲಿರುವಾಗ ಆಸ್ಪತ್ರೆಗಳಲ್ಲಿ ಗಾಯಗೊಂಡು ಚಿಕಿತ್ಸೆ ಪಡೆಯುತ್ತಿರುವ ಸೈನಿಕರಿಗೆ ತನ್ನ ಕವಿತೆಗಳನ್ನು ಓದಿಹೇಳಿ, ಧೈರ್ಯ, ಸಾಂತ್ವನ ನೀಡುತ್ತಾಳೆ.
ಲೆನಿನ್‌ಗ್ರಾದ್‌ಗೆ ಹಿಂದಿರುಗುವಾಗ ಮಾಸ್ಕೊದಲ್ಲಿ ತಂಗಿದ್ದಾಗ ಅವಳ ಕಾವ್ಯವಾಚನವಾಗುತ್ತದೆ. ಕೇಳಿದ ಮೂರು ಸಾವಿರ ಜನ ಎದ್ದುನಿಂತು ಜಯಘೋಷ ಮಾಡುತ್ತಾರೆ.

೧೯೪೫ – ಎರಡನೆ ಬಾರಿಗೆ ಲೆವ್‌ನ ಬಿಡುಗಡೆ.

ಏಪ್ರಿಲ್ ೧೯೪೫ – ಬರ್ಲಿನ್‌ನ ರೀಷ್‌ಸ್ಟಾಗ್ ಮೇಲೆ ರಷ್ಯದ ಧ್ವಜಾರೋಹಣ.

೧೪ ಆಗಸ್ಟ್ ೧೯೪೬ – ಮತ್ತೊಮ್ಮೆ 'ಭೀತಿಯುಗ'ದ ಪುನರಾವರ್ತನೆ. ಸಾಂಸ್ಕೃತಿಕ ಸಲಹಾಕಾರ ಷ್ದಾನೋವ್‌ನ ಆಡಳಿತದಲ್ಲಿ ಬುದ್ಧಿಜೀವಿಗಳ ದಮನ. ಆನಾಳನ್ನು ರೈಟರ್ಸ್ ಯೂನಿಯನ್‌ನಿಂದ ಹೊರಹಾಕಿ ಅವಳ ಕೃತಿಗಳನ್ನು ಬಹಿಷ್ಕರಿಸಲಾಗುತ್ತದೆ. ಅವಳ ಕೃತಿಗಳನ್ನು ಪ್ರಕಟಿಸುತ್ತಿದ್ದ 'ಲೆನಿನ್‌ಗ್ರಾದ್' ಮತ್ತು 'ಜ್ವೆಜ್ದಾ' ಪತ್ರಿಕೆಗಳಿಗೂ ಕೊಡಲಿಪೆಟ್ಟು ಬೀಳುತ್ತದೆ.
ಮತ್ತೆ ಮೂರನೆ ಬಾರಿಗೆ ಲೆವ್‌ನ ಬಂಧನ.

೧೯೫೦ – ಮಗನ ಜೀವ ಉಳಿಯಲೆಂದು ಆನಾ ಸ್ತಾಲಿನ್‌ನ ಸಾಧನೆಗಳನ್ನು ಕೀರ್ತಿಸಿ, ಬೇಕೆಂದೇ ತೀರಾ ಕಳಪೆ ಕವಿತೆಗಳನ್ನು ರಚಿಸುತ್ತಾಳೆ.

೧೯೫೩ – ಶ್ರಮಶಿಬಿರದಲ್ಲಿ ಆನಾಳ ಮೂರನೆಯ ಗಂಡ ಪ್ಯೂನಿನ್‌ನ ಸಾವು.
ಸ್ತಾಲಿನ್‌ನ ನಿಧನ. ಭೀತಿಯುಗದ ಅಂತ್ಯ. ರಷ್ಯದ ರಾಜಕೀಯದಲ್ಲಿ ಕ್ರುಶ್ಚೋವ್‌ನ ಏರಿಕೆ.

ಫೆಬ್ರವರಿ ೧೯೫೬ – ಕಮ್ಯುನಿಸ್ಟ್ ಪಕ್ಷದ ಇಪ್ಪತ್ತನೆ ಮಹಾಸಭೆಯಲ್ಲಿ ಸ್ತಾಲಿನ್ ಆಳಿಕೆಯಲ್ಲಿನ ಅತ್ಯಾಚಾರಗಳನ್ನು ಖಂಡಿಸಿ ಕ್ರುಶ್ಚೋವ್‌ನ ಭಾಷಣ. ಸ್ವಾತಂತ್ರ್ಯೀಕರಣದ ಪ್ರಾರಂಭ.
ಅಂತಿಮವಾಗಿ ಲೆವ್‌ನ ಬಿಡುಗಡೆ.

ಶ್ರಮಶಿಬಿರಗಳಿಂದ ಬಂದಿಗಳ ಬಿಡುಗಡೆ ಸಹ.
ಅದೇ ವರ್ಷ ಹಂಗರಿ, ಪೋಲೆಂಡ್‌ಗಳಲ್ಲಿ ದಂಗೆ.
ಅದರಿಂದಾಗಿ ಮತ್ತೆ ಸ್ವಾತಂತ್ರ್ಯೀಕರಣಕ್ಕೆ ಧಕ್ಕೆ.
ಇಟಲಿಯಿಂದ ಪಾಸ್ತರ್‌ನಾಕ್‌ನ 'ಡಾ. ಜಿವಾಗೊ' ಕಾದಂಬರಿಯ ಪ್ರಕಟನೆ.

ಅಕ್ಟೋಬರ್ ೧೯೫೮ – ಪಾಸ್ತರ್‌ನಾಕ್‌ಗೆ ನೊಬೆಲ್ ಬಹುಮಾನ. ದೇಶದಿಂದ ಗಡೀಪಾರಾಗಬೇಕಾಗಿಬರುವ ಭಯದಿಂದ ಪಾಸ್ತರ್‌ನಾಕ್ ಅದನ್ನು ತಿರಸ್ಕರಿಸುತ್ತಾನೆ.

ಮೇ ೧೯೫೯ – ಎರಡು ವರ್ಷಗಳ ನಂತರ ಮತ್ತೊಮ್ಮೆ ಸ್ವಾತಂತ್ರ್ಯೀಕರಣದ ಕಡೆಗೆ ಕ್ರುಶ್ಚೋವ್‌ನ ಒಲವು.

೧೯೬೦ – ಪಾಸ್ತರ್‌ನಾಕ್‌ನ ನಿಧನ.

ಅಕ್ಟೋಬರ್ ೧೯೬೪ – ಕ್ರುಶ್ಚೋವ್ ಪತನ. ಬ್ರೆಜ್ನೆವ್–ಕೊಸಿಗಿನ್ ಯುಗದ ಪ್ರಾರಂಭ. ಆನಾಳಿಗೆ ಇಟಲಿಯ ಎತ್ನಾ–ತೌರ್‌ಮಿನಾ ಪುರಸ್ಕಾರ, ಕವಿ ದಾಂತೆಯ ಐನೂರನೆ ಜಯಂತಿಯ ಸಂದರ್ಭದಲ್ಲಿ.

೧೯೬೫ – ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪ್ರಶಸ್ತಿಯ ಘೋಷಣೆ. ಇಟಲಿ, ಲಂಡನ್‌ಗಳ ಪ್ರವಾಸ.
ಆನಾಳ ಸಮಗ್ರ ಕವಿತೆಗಳ ಸಂಕಲನ 'ಕಾಲದ ಹರಿವು' ('ಬೇಗ್ ವ್ರೆಮೇನಿ') ಹಾಗೂ ಇತರ ಭಾಷೆಗಳಿಂದ ಮಾಡಿದ ಅನುವಾದಗಳ ಪ್ರಕಟನೆ. ರೈಟರ್ಸ್ ಯೂನಿಯನ್‌ನ ಅಧ್ಯಕ್ಷತೆ. ಲೆನಿನ್‌ಗ್ರಾಡ್ ಬಳಿಯ ಕಮರಾವೊ ಹಳ್ಳಿಯಲ್ಲಿ ಬೇಸಿಗೆಯ ವಾಸಕ್ಕೆ ಒಂದು 'ಹಳ್ಳಿಯ ಮನೆ' ('ದಾಚಾ')ಯ ಕೊಡಿಗೆ.

೧೯೬೬ – ಎಪ್ಪತ್ತೇಳನೆ ವಯಸ್ಸಿನಲ್ಲಿ ಮಾಸ್ಕೊ ಬಳಿ ನಿಧನ. ಕಮರಾವೊ ಹಳ್ಳಿಯಲ್ಲಿಯೇ ಅಂತ್ಯಸಂಸ್ಕಾರ.
ರಷ್ಯದ ಕಾವ್ಯದ ಒಂದು ಮಹಾಯುಗದ ಅಂತ್ಯ.

